ರಾಘವಾಂಕ ಮಹಾಕವಿಯ

# ವಚನ ಹರಿಶ್ಚಂದ್ರ ಚಾರಿತ್ರ

ಡಾ. ಜಿ. ಕೃಷ್ಣಪ್ಪ



ವಂತಿ ಪಬ್ಲಿಕೇಷನ್ಸ್

# ಡಾ॥ ಜಿ. ಕೃಷ್ಣಪ್ಪ

ಡಾ॥ ಜಿ. ಕೃಷ್ಣಪ್ಪ (೧೯೪೮) ಬೆಂಗಳೂರಿನವರು. ಇವರು ಸಹೃದಯ ವಿಮರ್ಶಕರು. ಕವಿ ದ.ರಾ. ಬೇಂದ್ರೆಯವರ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದು ಮಾತ್ರವಲ್ಲದೆ ತಮ್ಮ ಬದುಕಿನ ಬಹುಭಾಗವನ್ನು ಬೇಂದ್ರೆ ಸಾಹಿತ್ಯ ಪ್ರಸಾರಕ್ಕಾಗಿ ಸಮರ್ಪಿಸಿಕೊಂಡಿದ್ದಾರೆ. ಬೇಂದ್ರೆ ಕಾವ್ಯದ ಓದಿಗೆ ಹೊಸ ಆಯಾಮವನ್ನು ಒದಗಿಸಿಕೊಟ್ಟಿದ್ದಾರೆ.

ಪ್ರಾದೇಶಿಕ ಸಾರಿಗೆ ಕಛೇರಿಯಲ್ಲಿ ಸೇವೆಮಾಡಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿ ೨೦೦೬ರಲ್ಲಿ ನಿವೃತ್ತರಾಗಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದಿಂದ 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ– ಒಂದು ಅಧ್ಯಯನ ಎಂಬ ವಿಷಯದಲ್ಲಿ ಪಿಎಚ್.ಡಿ., ಪದವಿಯನ್ನು ಪಡೆದಿದ್ದಾರೆ. 'ಹಾಡು ಹಕ್ಕಿ ಅಂಬಿಕಾತನಯದತ್ತ', 'ಡಿ.ಆರ್. ಬೇಂದ್ರೆ', 'ನಾಕುತಂತಿ–ಒಂದು ಟಿಪ್ಪಣಿ', 'ಹೂತऽದ ಹುಣಸಿ', 'ಬರೆಹದಲ್ಲಿ ಬೇಂದ್ರೆಯವರ ಬದುಕು', 'ಅಂತರಂಗದತ್ತ ನಯನ', 'ರಸ್ತೆ ನಿಯಮಗಳು' ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಇವರು ಸರಳ ಕನ್ನಡದಲ್ಲಿ ರಚಿಸಿರುವ ಮಹಾಕವಿ ಲಕ್ಷ್ಮೀಶನ 'ವಚನ ಜೈಮಿನಿ ಭಾರತ', ಹರಿಹರ ಮಹಾಕವಿಯ 'ವಚನ ಗಿರಿಜಾಕಲ್ಯಾಣ', ರಾಘವಾಂಕ ಮಹಾಕವಿಯ 'ವಚನ ಹರಿಶ್ಚಂದ್ರ ಚಾರಿತ್ರ' ಕೃತಿಗಳು ಜನಮನ್ನಣೆ ಪಡೆದಿವೆ.

೧೯೮೮ ರಿಂದ ಶಾಲಾ ಕಾಲೇಜುಗಳಲ್ಲಿ ದ.ರಾ. ಬೇಂದ್ರೆ ಕವನ ಗಾಯನ ಸ್ಪರ್ಧೆಯನ್ನು ಏರ್ಪಡಿಸಿ, ದ.ರಾ.ಬೇಂದ್ರೆ ಕೃತಿಗಳನ್ನು ಬಹುಮಾನವಾಗಿ ನೀಡುತ್ತ ಬಂದಿದ್ದಾರೆ. ಈವರೆಗೆ ೫೨೦ಕ್ಕೂ ಹೆಚ್ಚು ಬೇಂದ್ರೆ ಕೇಂದ್ರಿತ ಕಾರ್ಯಕ್ರಮಗಳನ್ನು ನಾಡಿನಾದ್ಯಂತ ನಡೆಸಿದ್ದಾರೆ. ಬೆಂಗಳೂರಿನಲ್ಲಿ ತಮ್ಮ 'ದ.ರಾ.ಬೇಂದ್ರೆ ಕಾವ್ಯ ಕೂಟ'ದ ಅಡಿಯಲ್ಲಿ ೨೦೦೭ ರಿಂದ ಪ್ರತಿವರ್ಷ ದ.ರಾ.ಬೇಂದ್ರೆ ಕಾವ್ಯ ಕುರಿತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದ ವಿಮರ್ಶಾ ಸ್ಪರ್ಧೆ ಏರ್ಪಡಿಸಿ ಸುಮಾರು ರೂ. ೧೦,೦೦೦/– ನಗದು ಬಹುಮಾನ ನೀಡುತ್ತಿದ್ದಾರೆ.

ಇವರ ವಿಶಿಷ್ಟ ಸಾಹಿತ್ಯ ಪ್ರಸರಣ ಕಾರ್ಯವನ್ನು ಗುರುತಿಸಿ ಕನ್ನಡ ಪುಸ್ತಕ ಪ್ರಾಧಿಕಾರವು ೨೦೧೧ರ ಡಾ. ಜಿ.ಪಿ. ರಾಜರತ್ನಂ ಕನ್ನಡ ಸಾಹಿತ್ಯ ಪರಿಚಾರಕ ಪ್ರಶಸ್ತಿ ನೀಡಿದೆ. ೨೦೧೪ರಲ್ಲಿ ದ.ರಾ.ಬೇಂದ್ರೆ ರಾಷ್ಟ್ರೀಯ ಟ್ರಸ್ಟ್ ಧಾರವಾಡವು ಅಂಬಿಕಾತನಯದತ್ತ ರಾಷ್ಟ್ರೀಯ ಪ್ರಶಸ್ತಿ ನೀಡಿದೆ. ಅದೇ ವರ್ಷ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನಾಡಪ್ರಭು ಕೆಂಪೇಗೌಡ ಪ್ರಶಸ್ತಿ ಪ್ರದಾನಮಾಡಿದೆ.

೨೦೧೨ ಸಂಕ್ರಾಂತಿ ಶುಭಾಶಯಗಳು.

## ರಾಘವಾಂಕ ಮಹಾಕವಿಯ

# ವಚನ ಹರಿಶ್ಚಂದ್ರ ಚಾರಿತ್ರ

೧೪/೧/೨೦೧೨

ಡಾ. ಜಿ. ಕೃಷ್ಣಪ್ಪ




ವಂಶಿ ಪಬ್ಲಿಕೇಷನ್ಸ್
ನಂ. ೪, ಗಾಯಿತ್ರಿ ಕಾಂಪ್ಲೆಕ್ಸ್, ಟಿ.ಬಿ. ಬಸ್ ನಿಲ್ದಾಣದ ಹತ್ತಿರ
ಬಿ.ಹೆಚ್. ರಸ್ತೆ, ಸುಭಾಷ್‌ನಗರ,
ನೆಲಮಂಗಲ, ಬೆಂಗಳೂರು– ೫೬೨೧೨೩
ಮೊ : ೯೭೪೩೦೫೫೫೧೧, ೯೯೦೦೪೧೬೮೮೧

RAGAVANKA MAHA KAVIYA
VACHANA HARISCHANDRA CHARITHRA—

By Dr. G. Krishnappa, # 22, Sri Gurudatta Nilaya, 1st Cross, Netaji Nagar, Mathikere, Bengaluru-560054, Mobile : 9972109209

Published by

Vamshi Publications,
No.4, Gayathri Complex, Near T.B. Bus Stop
B.H. Road, Subhash Nagar,
Nelamangala, Bengaluru- 562123.
Mob: 9743055511, 9900416881

vamshipublications@gmail.com

ಮೊದಲನೆಯ ಮುದ್ರಣ : 2016



ಬಳಸಿದ ಕಾಗದ : 70 ಜಿ.ಎಸ್.ಎಂ. ಮ್ಯಾಪ್‌ಲಿಥೊ

ಡೆಮಿ $\frac{1}{8}$ , ಪುಟಗಳು : 144 + 8 ಪುಟ ಚಿತ್ರಗಳು

ಬೆಲೆ : ರೂ. 120/-

ಮುಖಪುಟ : ಅರುಣಕುಮಾರ್ .ಜಿ

*ಟೈಪ್‌ಸೆಟ್ :*

ಸ್ನೇಹ ಗ್ರಾಫಿಕ್ಸ್

ಭುವನೇಶ್ವರಿನಗರ, ಬೆಂಗಳೂರು– 23

ದೂರವಾಣಿ : 9341158906

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000

ಚಾಮರಾಜಪೇಟೆ, ಬೆಂಗಳೂರು–೧೮

ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಅರ್ಪಣೆ

ಪೂಜ್ಯ ಗುರುಗಳಾದ
ಪ್ರೊ॥ ಎಚ್. ಎಸ್. ಹರಿಶಂಕರ
ಅವರಿಗೆ

# ಗ್ರಂಥ ಸಂಪಾದನೆಯ ನಾಲ್ಕನೆ ಆಯಾಮ

**ಗ್ರಂಥ ಸಂಪಾದನೆ ನಾಲ್ಕು ಹಂತಗಳು :**

ಬೇಂದ್ರೆ ಕೃಷ್ಣಪ್ಪನವರೆಂದೇ ಚಿರಪರಿಚಿತರಾಗಿರುವ ಆತ್ಮೀಯ ಡಾ. ಜಿ. ಕೃಷ್ಣಪ್ಪನವರು ಈಗ ಹೊಸ ಬಗೆಯ ಗ್ರಂಥ ಸಂಪಾದನಾ ಕಾರ್ಯಕ್ಕೆ ತೊಡಗಿದ್ದಾರೆ. ಹಳಗನ್ನಡ ಕೃತಿಗಳ ಗ್ರಂಥ ಸಂಪಾದನಾ ಕಾರ್ಯ ಕಾಲದ ಅಗತ್ಯಕ್ಕೆ ತಕ್ಕಂತೆ ಬದಲಾಗುತ್ತಾ ವಿಸ್ತರಿಸಿಕೊಳ್ಳುತ್ತಿದೆ. ಮುದ್ರಣಕ್ಕಿಂತ ಮುಂಚಿನ ತಾಳೆಗರಿಗಳಲ್ಲಿದ್ದದ್ದನ್ನು ಮುದ್ರಣಕ್ಕೆ ತರುವಾಗ ಸಂಪಾದಿಸುತ್ತಿದ್ದ ಪರಿಯೇ ಬೇರೆ. ಆಗಿನ ಗ್ರಂಥ ಸಂಪಾದನಾ ಸ್ವರೂಪವನ್ನು ಕುರಿತು ಗ್ರಂಥ ಸಂಪಾದನಾ ಶಾಸ್ತ್ರವೇ ರೂಪಿತವಾಯಿತು. ಒಬ್ಬನೇ ಕವಿಯ ಒಂದೇ ಕೃತಿ ಹಲವಾರು ಪ್ರತಿಗಳಲ್ಲಿ ಸಿಕ್ಕಾಗ ಅವುಗಳಲ್ಲಿರುವ ವ್ಯತ್ಯಾಸಗಳನ್ನು ಪ್ರತಿಯ ಕಾಲ ನಿರ್ಣಯ ಅಕ್ಷರ ಸ್ಖಾಲಿತ್ಯ ಅರ್ಥವ್ಯತ್ಯಾಸ ಲುಪ್ತಭಾಗ ಇತ್ಯಾದಿ ಗಮನಿಕೆಗಳ ಹಿನ್ನೆಲೆಯಲ್ಲಿ ಕೃತಿಯನ್ನು ಸಂಪಾದಿಸ ಬೇಕಾಗುತ್ತಿತ್ತು. ಸಿಕ್ಕಿರುವ ಎಲ್ಲಾ ಪ್ರತಿಗಳಲ್ಲಿನ ಪ್ರತಿ ಪದಗಳ ಪ್ರತಿ ಪದ್ಯಭಾಗದ ವ್ಯತ್ಯಯ ವಿವರಗಳನ್ನು ನಮೂದಿಸುತ್ತಾ ಸ್ವೀಕೃತ ಭಾಗವನ್ನು ಸಮರ್ಥಿಸಿಕೊಳ್ಳುತ್ತಾ ಎಲ್ಲ ವಿವರಗಳ ಅಡಿಟಿಪ್ಪಣಿಗಳನ್ನು ಕೊಡುತ್ತಾ ಸಂಪಾದಿಸುವ ಆ ಕಾರ್ಯ ಜವಾಬ್ದಾರಿಗೆ ಸಂಪಾದನಾ ಶಾಸ್ತ್ರಜ್ಞಾನದ ಅರಿವು ಅಧ್ಯಯನದ ಹಿನ್ನೆಲೆ ಬೇಕಾಗುತ್ತಿತ್ತು. ಹೆಚ್ಚು ಕಡಿಮೆ ಈ ಪರಿಯ ಗ್ರಂಥ ಸಂಪಾದನಾ ಕ್ರಿಯೆ ಇಲ್ಲವೆನ್ನುವಷ್ಟು ಕಡಿಮೆಯಾಗಿದೆ. ಕಾರಣ, ತಾಳೆಗರಿಯಲ್ಲಿದ್ದು ಸಿಗದೇ ಹೋಗಿರುವ ಯಾವುದೇ ಹಳೆಯ ಗ್ರಂಥಗಳೂ ಇತ್ತೀಚೆಗೆ ಸಿಗುತ್ತಿಲ್ಲ. ಪ್ರಥಮ ಬಾರಿಗೆ ಸಿಕ್ಕು ಮುದ್ರಣಕ್ಕೆ ಒಳಗಾದವುಗಳ ಬೇರೆ ಪ್ರತಿಗಳೂ ಸಿಗುತ್ತಿಲ್ಲ. ಹೀಗಾಗಿ ಈ ರೀತಿಯಲ್ಲಿ ತಾಳೆಗರಿಯಿಂದ ಮುದ್ರಣ ಮಾಧ್ಯಮಕ್ಕೆ ಸಂಪಾದಿಸುವ ಪ್ರಥಮ ಹಂತದ ಸಂಪದನಾ ಕಾರ್ಯ ಈಗಿನ ಅಗತ್ಯವಾಗಿಲ್ಲ. ಇದಾದ ಮೇಲೆ ಇನ್ನೊಂದು ಬಗೆಯ ಸಂಪಾದನಾ ಕಾರ್ಯ ಕಾಲದ ಅಗತ್ಯದಂತೆ ಹುಟ್ಟಿ ಬೆಳೆಯಿತು. ವಿಸ್ತಾರವಾಗಿದ್ದ ಕಾವ್ಯವನ್ನು ಅದರ ಸಾರ ಸ್ವರೂಪ ಕೆಡದಂತೆ ಸಂಗ್ರಹಿಸಿ ಪ್ರಕಟಿಸುವ ವಿಧಾನ ಹುಟ್ಟಿಕೊಂಡಿತು. ಈ ಸಂಗ್ರಹ ಸಂಪಾದನಾ ಕಾರ್ಯ ಬಹುತೇಕವಾಗಿ ಶಾಲಾ ಕಾಲೇಜುಗಳಲ್ಲಿ ಶೈಕ್ಷಣಿಕ ಪಠ್ಯಭಾಗವಾಗಿ ಹಳಗನ್ನಡ ಕೃತಿಗಳನ್ನು ಬೋಧಿಸುವ ತುರ್ತಿನ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿತು.

ಇದಾದ ಮೇಲೆ ಇಡೀ ಕಾವ್ಯಭಾಗವನ್ನು ಅನ್ವಯಾನುಕ್ರಮದಲ್ಲಿ ಅರ್ಥೈಸುತ್ತಾ ಪ್ರತಿಪದಗಳ ಅರ್ಥ ನೀಡುತ್ತಾ ಅರ್ಥಬಹುಳತೆಗಳ ಸಂದರ್ಭಾನುಸಾರಿ ಅರ್ಥಗಳ ವಿವರಗಳನ್ನೂ ನೀಡುತ್ತಾ ಅರ್ಥವ್ಯತ್ಯಾಸ ಪದ ಪ್ರಯೋಗಗಳ ಕಾಲ ಸಂಬಂಧಗಳನ್ನೂ

ತಿಳಿಸುತ್ತಾ ಸಂಪಾದಿಸುವ ಹೊಸಬಗೆಯೊಂದು ಹುಟ್ಟಿಕೊಂಡಿತು. ಇದೂ ಕೂಡ ಶೈಕ್ಷಣಿಕ ಕ್ಷೇತ್ರದ ಬೋಧನಾ ಅಗತ್ಯವನ್ನು ಪೂರೈಸುವ ಪರಿಕ್ರಮದ ಫಲ. ಇದು ಸಂಪದನಾ ಕಾರ್ಯದ ಮೂರನೆಯ ಘಟ್ಟ. ಇದೀಗ ಹಳೆಗನ್ನಡ ನಡುಗನ್ನಡ ಕಾವ್ಯಗಳ ಗ್ರಂಥ ಸಂಪಾದನೆಯ ನಾಲ್ಕನೆಯ ಘಟ್ಟವೊಂದು ಹುಟ್ಟಿಕೊಂಡಿದೆ. ಹಳೆಗನ್ನಡದಲ್ಲಿರುವ ಗ್ರಂಥವನ್ನು ಸಮಕಾಲೀನ ಭಾಷೆಗೆ ತರ್ಜುಮೆ ಮಾಡುವುದು ಅರ್ಥಾತ್ ಸರಳಗನ್ನಡ ರೂಪದಲ್ಲಿ ರೂಪಾಂತರಿಸುವುದು. ಇದೂ ಕೂಡ ಶೈಕ್ಷಣಿಕ ಕ್ಷೇತ್ರದ ಬೋಧನೆಯ ಅಗತ್ಯಕ್ಕೆ ಹುಟ್ಟಿಕೊಂಡ ಪರಿಕ್ರಮವೇ. ಹೀಗೆ ಗ್ರಂಥ ಸಂಪಾದನಾ ಕಾರ್ಯ ಕಾಲದ ಅಗತ್ಯಕ್ಕೆ ಅನುಗುಣವಾಗಿ ಹೊಸ ಬಗೆ ಹೊಸ ವಿನ್ಯಾಸಗಳನ್ನು ಕಂಡುಕೊಳ್ಳುತ್ತಿದೆ. ಈ ಎಲ್ಲ ಬೆಳವಣಿಗೆಗಳನ್ನೂ ನಾನು ಗ್ರಂಥ ಸಂಪಾದನಾ ಕಾರ್ಯವೆಂದೇ ಕರೆಯಲು ಇಷ್ಟಪಡುತ್ತೇನೆ. ಕಾರಣ ಈ ಎಲ್ಲ ಬಗೆಯ ಬೆಳವಣಿಗೆಗಳ ಹಿಂದೆ ಇರುವ ಉದ್ದೇಶ ಕೃತಿಯ ಮೂಲ ಆಶಯಕ್ಕೆ ಕುಂದುಂಟಾಗದ ರೀತಿಯಲ್ಲಿ ಕವಿಕೃತಿಯನ್ನು ಹೊಸ ತಲೆಮಾರಿನ ಓದಿನ ಅಗತ್ಯಕ್ಕನುಗುಣವಾಗಿ ಓದುಗರಿಗೆ ಮುಟ್ಟಿಸುವುದು. ಈ ರೀತಿಯ ಬದಲಾವಣೆ ಬೆಳವಣಿಗೆಯ ಹಿಂದೆ ಘೋರವಾದ ಮತ್ತೊಂದು ಸತ್ಯ ಹುದುಗಿದೆ. ಹಳೆಗನ್ನಡ ಕೃತಿಗಳನ್ನು ಓದುವ ಆಸಕ್ತಿ ಪರಿಶ್ರಮ ಪರಿಪಾಠ ಇಲ್ಲವಾಗುತ್ತಿದೆ. ಇಪ್ಪತ್ತನೆಯ ಶತಮಾನದ ಮಧ್ಯಭಾಗದವರೆಗೂ ಪಾರಾಯಣ ಪರಂಪರೆ ಜೀವಂತವಾಗಿತ್ತು. ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶರ ಕಾವ್ಯಗಳನ್ನು ಅನಕ್ಷರಸ್ತರಿಗೂ ಮುಟ್ಟಿಸುವ ಕಾರ್ಯವನ್ನು ಈ ಪಾರಾಯಣ ಪರಂಪರೆ ಮಾಡುತ್ತಿತ್ತು. ಅದಕ್ಕೆ ಶ್ರದ್ಧೆ ಗೌರವಗಳ ಧಾರ್ಮಿಕ ಆಚರಣೆಯ ಆವರಣವಿತ್ತು. ಜನಪದ ಸಂಸ್ಕೃತಿಯಲ್ಲಿದ್ದ ಕಥಾಕಾಲಕ್ಷೇಪದ ಹಲವು ಮಾದರಿಗಳ ಅನುಕರಣೆಯಾಗಿ ಮೈತಾಳಿದ್ದು ಈ ಪಾರಾಯಣ ಪರಂಪರೆ. ಅಂದರೆ ಶ್ರವಣ ಧಾರೆಯ ಅನುಕರಣೆಯ ಭಿನ್ನರೂಪವೇ ಈ ಪಾರಾಯಣ ಪರಂಪರೆ. ಕಾಲದ ವೇಗದಲ್ಲಿ ಈ ಪರಂಪರೆಯೂ ಅರ್ಥಕಳೆದುಕೊಂಡು ಕಣ್ಮರೆಯಾಯಿತು.

ಇದಾದ ಮೇಲೆ ಹಳಗನ್ನಡದ ಓದು ಎಂಬುದು ಶಾಲಾಕಾಲೇಜುಗಳ ಪಠ್ಯಕ್ಕೆ ಸೀಮಿತಗೊಂಡ ಓದಾಯಿತು. ಈ ಓದಿನ ಪರಿಕ್ರಮವೂ ಬರಬರುತ್ತಾ ಅರ್ಥ ಕಳೆದುಕೊಳ್ಳತೊಡಗಿತು. ಕಾರಣ ಬೋಧನೆ ಎಂಬುದು ಪ್ರತಿಪದಗಳ ಅರ್ಥ ವ್ಯಾಖ್ಯಾನಕ್ಕೆ ಸೀಮಿತಗೊಂಡು ಅದರಾಚೆಗೆ ವಿಸ್ತರಿಸಿಕೊಳ್ಳದೆ ಹೋಯಿತು. ಕನ್ನಡ ಬೋಧಕರ ಶ್ರದ್ಧೆಯ ಕೊರತೆ, ಅಧ್ಯಯನದ ನಿರಾಸಕ್ತಿ ಸಂತೆಗೆ ಮೂರುಮೊಳ ಎಂಬಂತೆ ಪರೀಕ್ಷಾ ಅಂಕಗಳ ಮಿತದೃಷ್ಟಿ ಇತ್ಯಾದಿ ಹಲವು ಕಾರಣಗಳ ಪರಿಣಾಮ ಹಳೆಗನ್ನಡದ ಓದು ಕುಂಠಿತಗೊಂಡಿತು. ದೀಪಿಕೆಗಳಿಲ್ಲದೆ ಬೋಧನೆ ಸಾಧ್ಯವಿಲ್ಲ ಎಂಬ ಕಾಲಘಟ್ಟವನ್ನೂ ದಾಟಿದ ಹೊತ್ತಿನಲ್ಲಿ ಹಳೆಗನ್ನಡ ಕೃತಿಗಳ ಸರಳಗದ್ಯಾನುವಾದದ

ಅಗತ್ಯಕಂಡು ಬಂದಿತು. ಎಂ.ಎ. ಐಚ್ಛಿಕ ಓದುವ ಕನ್ನಡ ವಿದ್ಯಾರ್ಥಿಗಳಿಗೆ ಎಂ.ಎ. ತರಗತಿಗಳಲ್ಲೇ ಹಳಗನ್ನಡವನ್ನು ಬೋಧಿಸುವ ಅಧ್ಯಾಪಕರು ಸಿಗದಂತಹ ವಾತಾವರಣ ನಿರ್ಮಾಣವಾಯಿತು. ನಿವೃತ್ತ ಅಧ್ಯಾಪಕರಿಂದ ಹಳೆಗನ್ನಡ ಬೋಧನೆ ಮಾಡಿಸುವ ದುರ್ಗತಿಗೆ ವಿಶ್ವವಿದ್ಯಾಲಯಗಳ ಕನ್ನಡ ವಿಭಾಗಗಳು ಮುಟ್ಟಿದವು. ಇಂಥ ಹೀನ ಬೆಳವಣಿಗೆಯ ತುರ್ತಿಗೆ ಸರಳಗದ್ಯಾನುವಾದಗಳ ಅಗತ್ಯ ಕಂಡುಬಂದಿತು. ಈ ವಸ್ತು ಸತ್ಯವನ್ನು ದಾಖಲಿಸದೇ ಹೋದರೆ ಆತ್ಮವಂಚನೆ ಮಾಡಿಕೊಂಡಂತೆ. ಇಂಥ ಹೀನ ಬೆಳವಣಿಗೆಯನ್ನು ಕಂಡು ನೊಂದ ಹಲವು ಜನ ಹಿರಿಯರು ವಿದ್ಯಾರ್ಥಿಗಳ ಹಿತದೃಷ್ಟಿಯನ್ನು ಮನಗಂಡು ಸರಳಗದ್ಯಾನುವಾದಕ್ಕೆ ತೊಡಗಿದರು ಎಂಬುದೂ ಅಷ್ಟೇ ಕಠೋರ ಸತ್ಯ. ಹೀಗಾಗಿ ಹಳಗನ್ನಡ ಕೃತಿಗಳ ಸಂಪಾದನಾ ಕಾರ್ಯದಲ್ಲಿ ಈ ಬಗೆಯ ವಿಸ್ತರಣೆಗೊಂಡ ಮಾದರಿಯೊಂದು ಹುಟ್ಟಿದ್ದು ಕಾಲದ ಅಗತ್ಯವಲ್ಲದೆ ಬೇರೇನಿಲ್ಲ. ಕೆಲವರು ಸರಳಗದ್ಯಾನುವಾದದ ಈ ವಿಧಾನವನ್ನು ಸಂಪಾದನಾ ಕಾರ್ಯವೆಂದು ಕರೆದಿರುವುದಕ್ಕೆ ಆಕ್ಷೇಪಿಸಬಹುದು. ಅವರ ಆಕ್ಷೇಪವನ್ನು ಗೌರವಿಸುತ್ತಲೇ ನಾನು ನನ್ನ ಅಭಿಪ್ರಾಯವನ್ನು ಇಲ್ಲಿ ಹೇಳಬಯಸಿದ್ದೇನೆ. ಸರಳಗದ್ಯಾನುವಾದ ಸುಲಭದ ಕೆಲಸವಲ್ಲ. ಇಡೀ ಕಾವ್ಯಕೃತಿಯ ಭಾವಸೌಂದರ್ಯ ಅರ್ಥ ಸೌಂದರ್ಯ ವಸ್ತು ಧ್ವನಿ ಸೌಂದರ್ಯ ಕೆಡದ ಕುಂದುಂಟಾಗದ ರೀತಿಯಲ್ಲಿ ಈ ಕಾರ್ಯವನ್ನು ಮಾಡಬೇಕಾಗುತ್ತದೆ. ಇದು ಪರಿಶ್ರಮವಿಲ್ಲದೆ ಫಲಿಸುವುದಿಲ್ಲ. ಹಲವು ತೃಟಿತ ಪ್ರತಿಗಳನ್ನು ಇಟ್ಟುಕೊಂಡು ಸಂಪಾದಿಸುವ ಕಾರ್ಯದ ಶ್ರಮಶ್ರದ್ಧೆಗಿಂತಲೂ ಹೆಚ್ಚಿನ ಪರಿಣತಿ ಇದಕ್ಕೆ ಬೇಕಾಗುತ್ತದೆ. ಬರೀ ಪ್ರತಿಪದಾರ್ಥಗಳಲ್ಲಿ ಗದ್ಯಾನುವಾದದ ಕರ್ಮ ಮುಗಿದರೆ ಅದೊಂದು ಕೃತಿಹತ್ಯೆಯ ಕ್ರೌರ್ಯ. ಆದ್ದರಿಂದ ಗದ್ಯಾನುವಾದಕ್ಕೆ ತೊಡಗಿದ ವಿದ್ವಾಂಸ ಕೇವಲ ಪಂಡಿತನಾಗಿದ್ದರೆ ಸಾಲದು ಅವನೊಬ್ಬ ಸೂಕ್ಷ್ಮಸಂವೇದಿ ವಿಮರ್ಶಕನೂ ಆಗಿರ ಬೇಕಾಗುತ್ತದೆ. ಬೇರೆ ಭಾಷೆಯ ಕೃತಿಯೊಂದನ್ನು ಅನುವಾದ ಮಾಡಬೇಕಾದಾಗ ಮೂಲಭಾಷೆಯ ನುಡಿಗಟ್ಟುಗಳ ಸಾಂಸ್ಕೃತಿಕ ಸಂದರ್ಭದ ಅನುಭವ ಗೌರವವನ್ನು ಮನಗಾಣದೆ ಹೋದರೆ ಕಬ್ಬಿನ ರಸ ಬಿಟ್ಟು ಕಬ್ಬಿನ ಗರಿ ಮೆಯ್ದು ಪರಿಯಾಗುತ್ತದೆ. ಅದೇ ರೀತಿ ಇಲ್ಲಿ ತನ್ನ ಭಾಷೆಯೊಳಗೇ ಇರುವ ಬಹುಸಂಸ್ಕೃತಿಗಳ ಒಡಲಗರ್ಭದ ಕುಡಿ ಕುಸುರಿನಂತಿರುವ ನುಡಿಗಟ್ಟುಗಳ ನಿಜಸೌಂದರ್ಯವನ್ನು ಸರಳಗದ್ಯಕ್ಕೆ ಅರ್ಥಕೆಡದಂತೆ ಅನುವಾದಿಸಬೇಕಾಗುತ್ತದೆ. ಕಾವ್ಯದ ವಾಚ್ಯಾರ್ಥಕ್ಕಿಂತ ವ್ಯಂಜಿತಭಾವ ಸೌಂದರ್ಯವನ್ನು ಒಡಮೂಡಿಸಬೇಕಾಗುತ್ತದೆ. ಹೀಗಾಗಿ ಅನುವಾದಕ ಕವಿ ಪ್ರಜ್ಞೆಯನ್ನೊಳಗೊಂಡ ಅನುವಾದಕನಾಗಿರಬೇಕು. ಭಾಷಾ ಪರಂಪರೆಯ ಪರಿಜ್ಞಾನಿಯಾಗಿರಬೇಕು. ಈ ಎಲ್ಲ ಕಾರಣಗಳ ಹಿನ್ನೆಲೆಯಲ್ಲಿ ಈ ಸರಳಗದ್ಯಾನುವಾದದ ವಿಧಾನವೂ ವೈಜ್ಞಾನಿಕ ದೃಷ್ಟಿಯನ್ನೊಳಗೊಂಡ ಗ್ರಂಥ ಸಂಪಾದನಾಕಾರ್ಯವೆಂದೇ ನನ್ನ ಅಭಿಪ್ರಾಯ.

**ಅಭಿವ್ಯಕ್ತಿ ಸ್ವಾತಂತ್ರ್ಯದ ಗುಣಗೌರವ :**

ರಾಘವಾಂಕನ ಹರಿಶ್ಚಂದ್ರ ಕಾವ್ಯ ಕನ್ನಡದ ಬಹಳ ಮುಖ್ಯ ಕಾವ್ಯಕೃತಿಗಳಲ್ಲಿ ಒಂದು. ಹರಿಹರನ ಸೋದರಳಿಯನೂ ಪ್ರಿಯಶಿಷ್ಯನೂ ಆಗಿದ್ದ ರಾಘವಾಂಕ ಈ ಕೃತಿ ಬರೆದು ತನ್ನ ಸೋದರಮಾವನಿಂದ ಅರ್ಥಾತ್ ಕವಿಗುರು ಹರಿಹರನಿಂದ ಕಪಾಳಮೋಕ್ಷಕ್ಕೆ ಒಳಗಾದದ್ದು ಪ್ರಚಲಿತ ಘಟನೆ. ದಂತಕತೆಯಂತಿರುವ ಈ ಘಟನೆ ಕಪಾಳಮೋಕ್ಷದಿಂದಾಗಿ ಐದು ಹಲ್ಲುಗಳನ್ನು ಕಳೆದುಕೊಂಡ ರಾಘವಾಂಕ ಐದು ಶೈವ ಭಕ್ತರ ಕೃತಿ ಬರೆದು ಮರಳಿ ಹಲ್ಲುಗಳನ್ನು ಪಡೆದದ್ದನ್ನೂ ಹೇಳುತ್ತಿದೆ. ಪಂಚಾಕ್ಷರೀ ಉಚ್ಛಾರದ ಅಧಿಕಾರದಿಂದ ವಂಚಿತನಾದವನು ಮತ್ತೆ ನಮಃ ಶಿವಾಯದ ಮಂತ್ರೋಚ್ಛಾರಕ್ಕೆ ಅರ್ಹನಾದದ್ದೇ ಈ ದಂತ ಕತೆಯ ಗತಿಗಂತವ್ಯವಿರಬಹುದು. ಕವಿಯೊಬ್ಬನ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕಿದರೆ ಸಿದ್ಧಾಂತಬದ್ಧ ರಚನೆಗೆ ತೊಡಗಿದರೆ ಕಾವ್ಯದ ಗುಣಗೌರವಕ್ಕೆ ಎಂಥಸ್ಥಿತಿ ಬರಬಹುದೆನ್ನುವುದಕ್ಕೆ ರಾಘವಾಂಕ ಮತ್ತು ಅವನ ಇತರ ಕೃತಿಗಳು ಬಹುದೊಡ್ಡ ಉದಾಹರಣೆಗಳು. ಕವಿರಾಘವಾಂಕನ ಕಾವ್ಯ ಗರಿಮೆಯ ಕೃತಿ ಹರಿಶ್ಚಂದ್ರಕಾವ್ಯ.

ಮಿತ್ರರಾದ ಜಿ. ಕೃಷ್ಣಪ್ಪನವರು ಈಗಾಗಲೆ ಜೈಮಿನಿ ಭಾರತ ಮತ್ತು ಗಿರಿಜಾಕಲ್ಯಾಣ ಕೃತಿಗಳನ್ನು ಸರಳಗದ್ಯಾನುವಾದಕ್ಕೆ ಅಳವಡಿಸಿ ಸಂಪಾದನಾ ಕಾರ್ಯದಲ್ಲಿ ಪಳಗಿದ್ದಾರೆ. ಅವರು ಹರಿಶ್ಚಂದ್ರ ಕಾವ್ಯದ ಸೊಗಸಿಗೆ ಮಾರುಹೋಗಿ ಅದನ್ನು ಈಗಿನ ಓದುಗ ಪ್ರಜ್ಞೆಗೆ ಮುಟ್ಟಿಸುವ ಸದುದ್ದೇಶದಿಂದ ಈ ಬಗೆಯ ಗ್ರಂಥ ಸಂಪಾದನಾ ಕಾರ್ಯಕ್ಕೆ ಕೈಹಾಕಿರುವುದು ಶ್ಲಾಘನೀಯ ವಿಚಾರ. ರಾಘವಾಂಕನ ಹರಿಶ್ಚಂದ್ರಕಾವ್ಯದ ರಸಾರ್ದ್ರತೆಗೆ ಭಂಗ ಬರದಂತೆ ಹಾಗೂ ಯಾವುದೇ ವಿವರಗಳು ಕಣ್ತಪ್ಪಿ ಹೋಗದಂತೆ ಇಲ್ಲಿ ಎಚ್ಚರವಹಿಸಲಾಗಿದೆ. ಅಲ್ಲದೆ ಹರಿಶ್ಚಂದ್ರ ಕಾವ್ಯದ ವಸ್ತುಧ್ವನಿಗೆ ಎರವಾಗದ ವಿಮರ್ಶನ ಪ್ರಜ್ಞೆ ಇಲ್ಲಿ ಕೆಲಸ ಮಾಡಿದೆ. ಇಡೀ ತಮ್ಮ ಜೀವನವನ್ನು ಬೇಂದ್ರೆಯವರ ಕಾವ್ಯದ ಓದಿಗೆ ಸಮರ್ಪಿಸಿಕೊಂಡು ಕರ್ನಾಟಕದಾದ್ಯಂತ ಬೇಂದ್ರೆಯಜ್ಞನ ಕಾವ್ಯ ಪ್ರಸಾರದ ಪರಿಚಾರಿಕೆಯನ್ನು ಧಾರ್ಮಿಕ ಆಚರಣೆಯ ನಿಷ್ಠೆ, ಗೌರವಗಳಲ್ಲಿ ನಡೆಸಿಕೊಂಡು ಬರುತ್ತಿರುವ ಆತ್ಮೀಯ ಮಿತ್ರ ಕೃಷ್ಣಪ್ಪನವರಿಗೆ ಕಾವ್ಯದ ಓದು ಎಂಬುದು ಹಗುರ ಸಂಗತಿಯಲ್ಲ. ಅದೊಂದು ಧ್ಯಾನ ಮನನ ಮಂಥನ ವಿಧಿಯಲ್ಲಿ ನಡೆಯುವ ಕಾಯಕ ಗೌರವ. ಬೇಂದ್ರೆಯವರ ಒಂದೊಂದು ಕವಿತೆಯನ್ನು ಅದರ ಪದಪ್ರಯೋಗದ ನೆಲೆಯಿಂದ ಹಿಡಿದು ಪದಮೈತ್ರಿಯ ಸೊಗಸನ್ನು ಒಳಗೊಂಡಂತೆ ಪ್ರತೀತಿಗೊಳ್ಳುವ ಧ್ವನಿ ವಿಸ್ತಾರದವರೆಗೆ ಕಾಲತ್ರಯ ಪ್ರಜ್ಞೆಯಲ್ಲಿ ಪರಿಭಾವಿಸುವವರು. ಪ್ರಾಯೋಗಿಕ ವಿಮರ್ಶೆಯ ಪರಿಕ್ರಮದಲ್ಲಿ ಹರಿಯುವ ವಿಮರ್ಶಾವಿಧಾನ ಇದಾದರೂ ಅಲ್ಲಿಯೇ ಸ್ಥಗಿತಗೊಂಡದ್ದಲ್ಲ; ಸಮಕಾಲೀನ ಜೀವನ ವಿನ್ಯಾಸದ ತವಕ ತಲ್ಲಣಗಳಿಗೆ

ಮುಖಾಮುಖಿಯಾಗಿಸಿ ಅಲ್ಲಿನ ದರ್ಶನ ದೀಪ್ತಿಯನ್ನು ಕಾಣಿಸುವ ವಿಮರ್ಶಾಚಕ್ಷು ಇವರದು. ಇಂಥ ಅಧ್ಯಯನ ಪರಿಶ್ರಮದ ಹಿನ್ನೆಲೆ ಹರಿಶ್ಚಂದ್ರ ಕಾವ್ಯವನ್ನು ಸರಳಗದ್ಯಾನುವಾದಕ್ಕೆ ತೊಡಗಿಸಿರುವುದು ಈ ಕಾರ್ಯದ ಸೊಗಸನ್ನು ಹೆಚ್ಚಿಸಲು ಕಾರಣ ಮೂಲವಾಗಿದೆ. ಹರಿಶ್ಚಂದ್ರ ಕಾವ್ಯದ ವಸ್ತುಧ್ವನಿಯನ್ನು ಕಾಯ್ದಿಟ್ಟುಕೊಳ್ಳುವ ಹೊಣೆಗಾರಿಕೆಯಲ್ಲಿ ಈ ಸಂಪಾದನಾ ಕ್ರಿಯೆ ನಡೆದಿದೆ. ಹರನೆಂಬುದೆ ಸತ್ಯ ಸತ್ಯನೆಂಬುದೆ ಹರ ನೆನ್ನುವ ರಾಘವಾಂಕ ಪ್ರಜ್ಞೆಗೆ ಊನ ಉಂಟಾಗದಂತೆ ಸರಳಗದ್ಯಾನುವಾದವನ್ನು ಮಾಡಿರುವ ಮಿತ್ರರಾದ ಕೃಷ್ಣಪ್ಪನವರಿಗೆ ಗೌರವದ ನಮನಗಳು. ನನ್ನಿಂದ ಈ ನಾಲ್ಕು ಮಾತು ಬರೆಸಿದ ಅವರ ಪ್ರೀತಿ ಅಭಿಮಾನದ ಒತ್ತಾಸೆಗೆ ತುಂಬುಭಾವದ ಕೃತಜ್ಞತೆಗಳು

**– ಎಸ್. ಜಿ. ಸಿದ್ಧರಾಮಯ್ಯ**

# ಲೇಖಕನ ನುಡಿ

ಸಹಸ್ರಾರು ವರ್ಷಗಳಿಂದ ಭಾರತದ ಜನಮನದಲ್ಲಿ ಒಂದಾಗಿ ಅವರನ್ನು ಸತ್ಯಮುಖಿಗಳನ್ನಾಗಿಸಿರುವ ಕಥೆ ಸತ್ಯ ಹರಿಶ್ಚಂದ್ರ. ಭಾರತೀಯ ಕಥಾಸಾಹಿತ್ಯದಲ್ಲಿ ಹರಿಶ್ಚಂದ್ರನನ್ನು ಕುರಿತು ರಚಿತವಾಗಿರುವ ಮೊದಲ ಕೃತಿ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'. ಅದು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ರಾಘವಾಂಕನು ಷಟ್ಪದಿ ಪ್ರಕಾರದ ಪ್ರವರ್ತಕನಾಗಿದ್ದು, ಷಟ್ಪದಿ ಸಂಪ್ರದಾಯಕ್ಕೆ ಭದ್ರ ಬುನಾದಿ ಹಾಕಿದ ಕವಿಯಾಗಿದ್ದಾನೆ. ಅವನು ಪಂಪಾಕ್ಷೇತ್ರದವನು. 'ಹಂಪೆಯ ಹರೀಶ್ವರನ ವರಸುತ' (೧-೧೫). ಹರಿಹರ ರಾಘವಾಂಕರು ಗುರು-ಶಿಷ್ಯರು. ಹರಿಹರ ರಾಘವಾಂಕನ ಸೋದರಮಾವ. ರಾಘವಾಂಕನನ್ನು ರಾಘವ, ರಾಘವದೇವ, ರಾಘವ ಪಂಡಿತ ಎಂದು ಕರೆಯುವರು. ಅವನ ತಂದೆ ಮಹಾದೇವಭಟ್ಟ, ತಾಯಿ ರುದ್ರಾಣಿ. ಅವನಿಗೆ 'ಉಭಯಕವಿ ಶರಭ ಭೇರುಂಡ', 'ಉಭಯ ಕವಿ ಕಮಲರವಿ' ಮತ್ತು 'ಅದಟಕವಿನಿಕರ ಚೌದಂತ' ಎಂಬ ಬಿರುದುಗಳಿದ್ದವು. ಅವನ ಕಾಲ ಕ್ರಿ.ಶ. ೧೨೮೦ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಹರಿಶ್ಚಂದ್ರ ಕಾವ್ಯದ ನಾಯಕ ಹರಿಶ್ಚಂದ್ರನಾಗಿದ್ದರೂ ರಾಘವಾಂಕನು ತನ್ನ 'ಕೃತಿಗೆ ನಾಮಂ ಹರಿಶ್ಚಂದ್ರ ಚಾರಿತ್ರ ವೀಕೃತಿಗೊಡೆಯನಮಳ ಪಂಪಾ ವಿರೂಪಾಕ್ಷ' (೧-೧೫) ಎಂದು ಹೇಳಿಕೊಂಡಿರುವ ಶಿವಭಕ್ತ. ಅವನು 'ಮಹಾಲಿಂಗ ಭಕ್ತರ ಭಕ್ತ', ಅವನು ರಚಿಸಿರುವ ಕಾವ್ಯಗಳಲ್ಲಿ 'ಹರಿಶ್ಚಂದ್ರ ಕಾವ್ಯ', 'ವೀರೇಶ ಚರಿತೆ', ' ಸಿದ್ಧರಾಮ ಪುರಾಣ', 'ಸೋಮನಾಥ ಚರಿತ್ರೆ' ಮಾತ್ರ ಸಿಕ್ಕಿವೆ. ಅವನು 'ಶರಭ ಚಾರಿತ್ರ', 'ಹರಿಹರ ಮಹತ್ವ' ಕೃತಿಗಳನ್ನು ರಚಿಸಿರುವನೆಂದು ಹೇಳಿದ್ದು ಅವುಗಳು ಸಿಕ್ಕಿಲ್ಲ.

'ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆ', 'ಪೊಸಮಾಲೆ ಯಿರ್ದೊಡೇನು ತವೆ ಮುಡಿವರಿಲ್ಲದೊಡೆ' (೧-೨೫) ಎಂದು ಸಹೃದಯ ರಸಿಕರಿಂದ ಕಾವ್ಯ ಮತ್ತು ಹೂಗಂಪು ಸಾರ್ಥಕತೆಯನ್ನು ಪಡೆಯುತ್ತದೆ ಎಂದು ಹೇಳಿ, 'ತುದಿ ಮೊದಲ್ತನಕ ಹೇರಿದ ನವ್ಯ ಫಳರಸಂಗಳನು ಸವಿಸುವುದು' (೧-೧೮) ಎಂದು ಕೇಳಿಕೊಂಡಿದ್ದಾನೆ.

ಬಿ.ಎಂ. ಶ್ರೀಯವರು 'ರಾಘವಾಂಕನು ಹೊಸಗನ್ನಡದಲ್ಲಿ ಬರೆದಿರುವ ಕವಿಗಳಲ್ಲಿ ಮೊದಲನೆಯವನು; ನಮ್ಮ ಉತ್ತಮ ಕವಿಗಳಲ್ಲಿ ಒಬ್ಬನು' ಎಂದು ಹೇಳಿದ್ದಾರೆ. ಎ.ಆರ್. ಕೃಷ್ಣಶಾಸ್ತ್ರಿಗಳು 'ಹರಿಶ್ಚಂದ್ರೋಪಾಖ್ಯಾನವು ವೇದ ಪುರಾಣ ಸಾಹಿತ್ಯಗಳಲ್ಲಿ ಪ್ರಸಿದ್ಧವಾದ ಪುರಾತನ ಕಥೆಯಾಗಿದೆ. ಆದರೆ, ವೈದಿಕ ಗ್ರಂಥಗಳಲ್ಲಿ ಮುಖ್ಯವಾಗಿ ಈ ಕಥೆಯ ಯಾಜ್ಞಿಕಾಂಶವೂ ಪೌರಾಣಿಕ ಗ್ರಂಥಗಳಲ್ಲಿ ಐತಿಹಾಸಿಕಾಂಶವೂ, ಸಾಹಿತ್ಯ ಗ್ರಂಥಗಳಲ್ಲಿ ಧಾರ್ಮಿಕಾಂಶವೂ ಪ್ರತಿಪಾದಿತವಾಗಿದೆಯೆಂದು ಹೇಳಬಹುದು. ಇವೆಲ್ಲವೂ ಆಮೂಲಾಗ್ರವಾಗಿ, ಅಖಂಡವಾಗಿ, ವಿಸ್ತಾರವಾಗಿ ಯಾವ ಒಂದು ಕಡೆಯಲ್ಲಿಯೂ ದೊರೆಯುವುದಿಲ್ಲ.

ಹರಿಶ್ಚಂದ್ರನ ವೃತ್ತಾಂತ ಬರುವ ವೈದಿಕ ಗ್ರಂಥಗಳು ಮುಖ್ಯವಾಗಿ ಮೂರು:-

೧. ಐತರೇಯ ಬ್ರಾಹ್ಮಣ (ಪಂಚಿಕಾ ೭, ಅಧ್ಯಾಯ ೩)

೨. ಸಾಂಖ್ಯಾಯನ ಶ್ರೌತಸೂತ್ರ (೧೫; ೧೭-೨೫)

೩. ವೇದಾರ್ಥ ದೀಪಿಕಾ (ಋಗ್ವೇದ ಭಾಗ ೧-೨೪)

ಇವು ಪುರಾಣಗಳಿಗಿಂತಲೂ ಪ್ರಾಚೀನ ಎಂದು ತಿಳಿಸಿದ್ದಾರೆ. (ಹರಿಶ್ಚಂದ್ರ ಕಾವ್ಯ ಸಂಗ್ರಹ : ಪೀಠಿಕೆ)

'ಹರಿಶ್ಚಂದ್ರ ಕಾವ್ಯ' ವನ್ನು ಕುರಿತು ಕುವೆಂಪು ಅವರು 'ರಾಘವಾಂಕನ ಕಥನ ಕೌಶಲ, ದೃಶ್ಯವಿಭಾಗ ರೀತಿ, ಪಾತ್ರಗಳ ಕ್ರಿಯೆ ಮತ್ತು ಅಭಿನಯ ಕ್ರಿಯೆಗಳ ವರ್ಣನೆ, ಅವರ ಸಂಭಾಷಣೆ, ಶೋಕ, ಕ್ರೋಧ, ಸತ್ಯಸಂಧತೆ, ಕ್ರೌರ್ಯ, ಕರ್ತವ್ಯ ಪರಾಯಣತೆ, ಶ್ರದ್ಧೆ, ಭಕ್ತಿ-ಒಟ್ಟಿನಲ್ಲಿ ಕಾವ್ಯದಲ್ಲಿ ಚೆಲ್ಲಿಸೂಸಿರುವ ನಾಟಕೀಯತೆ, ಎಲ್ಲವೂ ಒಂದೊಂದಾಗಿ, ಒಂದರಮೇಲೊಂದಾಗಿ ನುಗ್ಗಿ ಬಂದು, ನಮ್ಮನ್ನು ಭಾವನಾ ಪ್ರಪಂಚಕ್ಕೆ ಕೊಂಡೊಯ್ದು ನಗಿಸಿ, ಅಳಿಸಿ, ಸಿಟ್ಟುಗೊಳಿಸಿ, ಸಂತೋಷಪಡಿಸಿ ತಣಿಸುತ್ತವೆ. ರಾಘವಾಂಕನು ಸಂಪೂರ್ಣವಾಗಿ ನಮ್ಮವನಾಗುತ್ತಾನೆ; ನಾವು ಸಂಪೂರ್ಣವಾಗಿ ಆತನವರಾಗುತ್ತೇವೆ...... 'ಹರಿಶ್ಚಂದ್ರ ಕಾವ್ಯ ಸಂಗ್ರಹ'ದ ವಾಚನ ರಸಿಕರಿಗೊಂದು ರಸಯಾತ್ರೆ', ಎಂದು ಹೇಳಿದ್ದಾರೆ. (ಕುವೆಂಪು ಸಮಗ್ರ ಗದ್ಯಸಂಪುಟ ೧. ಹರಿಶ್ಚಂದ್ರ ಕಾವ್ಯ)

'ಹರಿಶ್ಚಂದ್ರ ಕಾವ್ಯ'ವನ್ನು ಸರಳಗದ್ಯದಲ್ಲಿ ರಚಿಸಲು ನಾನು ೧. ಹರಿಶ್ಚಂದ್ರ ಕಾವ್ಯ ಸಂಗ್ರಹ, ಸಂ: ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರೀ, ೨. ರಾಘವಾಂಕ ವಿರಚಿತ ಹರಿಶ್ಚಂದ್ರ ಕಾವ್ಯಂ. ಸಂ: ಎನ್. ಬಸವಾರಾಧ್ಯ, ಪಂಡಿತ ಎಸ್. ಬಸಪ್ಪ ೩. ರಾಘವಾಂಕ ವಿರಚಿತ ಹರಿಶ್ಚಂದ್ರ ಕಾವ್ಯ ಸಂ: ವೈ. ನಾಗೇಶ ಶಾಸ್ತ್ರಿಗಳು, ಎಂ.ಜಿ. ವೆಂಕಟೇಶಯ್ಯನವರು-ಈ ಕೃತಿಗಳನ್ನು ಅಧ್ಯಯನ ಮಾಡಿದೆನು.

ನನ್ನ ಗದ್ಯ ಬರಹವನ್ನು ಶಾಂತಚಿತ್ತದಿಂದ ಕೇಳಿದ ಹಳಗನ್ನಡ ಕಾವ್ಯ ಪ್ರೇಮಿ ಪ್ರೊ॥ ಡಿ. ಕೆ. ಶ್ಯಾಮಸುಂದರ ರಾವ್ ಮತ್ತು ಧ್ಯಾನ ಮಾರ್ಗಿ ಡಾ. ಕೆ.ಬಿ. ಲೋಕೇಶ್ವರಪ್ಪ ನವರು ಸೂಕ್ತ ಸಲಹೆ ನೀಡಿ, ಕೃತಿ ದೋಷರಹಿತವಾಗಿ ಮೂಡಿ ಬರಲು ಕಾರಣರಾಗಿದ್ದಾರೆ. ಅವರ ಸ್ನೇಹಸ್ಪರ್ಶದ ಹಸಿರು ನನ್ನ ಉಲ್ಲಾಸ.

ನನ್ನ ಈ ಪ್ರಯತ್ನಕ್ಕೆ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸಿದ ಡಾ. ಪಿ.ವಿ. ನಾರಾಯಣ, ಪಂಡಿತ ಎಚ್. ಹನುಮಂತರಾಯ, ಡಾ. ಎಂ. ಬಸವಣ್ಣ, ಶ್ರೀ ಗುಡಿಹಳ್ಳಿ ನಾಗರಾಜ, ಡಾ. ಜಿ.ಬಿ. ಹರೀಶ್, ಶ್ರೀ ಎನ್. ಸೂರ್ಯನಾರಾಯಣ, ಶ್ರೀ ಎಂ. ನರಸಿಂಹ, ಶ್ರೀ ಬಿ.ಎಸ್. ಜಯಪ್ರಕಾಶ ನಾರಾಯಣ ಅವರನ್ನು ಸದಾ ನೆನೆಯುತ್ತೇನೆ. ನನ್ನ ಸಾಹಿತ್ಯ ಚಟುವಟಿಕೆಯನ್ನು ಸದಾ ಪ್ರೋತ್ಸಾಹಿಸುತ್ತಿರುವ ನನ್ನ

ಗುರುಗಳಾದ ಡಾ. ಕೆ. ಅನಂತರಾಮು, ಡಾ. ವಾಮನ ಬೇಂದ್ರೆ, ಪ್ರೊ॥ ಎಚ್. ಎಸ್. ಹರಿಶಂಕರ ಅವರಿಗೆ ನಾನು ಸದಾ ಋಣಿಯಾಗಿದ್ದೇನೆ.

ಈ 'ಹರಿಶ್ಚಂದ್ರ ಚಾರಿತ್ರ' ವನ್ನು 'ಸುಧಾ' ವಾರಪತ್ರಿಕೆಯಲ್ಲಿ (೨೩-೧೦-೨೦೧೪ ರಿಂದ ೧೮-೧೨-೨೦೧೪ರವರೆಗೆ ೯ ವಾರಗಳು) ಪ್ರಕಟಿಸಿದ ಸಂಪಾದಕರಾದ ಶ್ರೀ ಕೆ. ಎನ್. ತಿಲಕ್‌ಕುಮಾರ್ ಅವರಿಗೆ ನನ್ನ ವಂದನೆಗಳು. ಶ್ರೀ ಬಿ.ಎಂ. ಹನೀಫ್ ಮತ್ತು 'ಸುಧಾ' ಸಂಪಾದಕ ಮಂಡಲಿಗೆ ನನ್ನ ನಮನಗಳು. 'ಪ್ರಜಾವಾಣಿ' ಸಂಪಾದಕರಾದ ಶ್ರೀ ಕೆ.ಎನ್. ಶಾಂತಕುಮಾರ್, ಕಾರ್ಯ ನಿರ್ವಾಹಕ ಸಂಪಾದಕ ಶ್ರೀ ಪದ್ಮರಾಜ ದಂಡಾವತಿ ಅವರಿಗೆ ನನ್ನ ಕೃತಜ್ಞತೆಗಳು. ಈ ಕಥೆಗೆ ಸುಂದರ ಚಿತ್ರಗಳನ್ನು ರಚಿಸಿದ ಶ್ರೀ ಜಿ.ಕೆ. ಶಿವಣ್ಣ ಅವರಿಗೆ ನನ್ನ ನಮಸ್ಕಾರಗಳು.

ನನ್ನ ಬೇಂದ್ರೆ ಕಾವ್ಯ ಅಧ್ಯಯನ ಮತ್ತು ಹಳಗನ್ನಡ ಕಾವ್ಯಗಳ ಆಸಕ್ತಿಯನ್ನು ಮೆಚ್ಚಿ ಪ್ರೋತ್ಸಾಹಿಸುತ್ತಿರುವ ಕವಿ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯ ಅವರು ಈ ಕೃತಿಗೆ ಅಮೂಲ್ಯವಾದ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ನನ್ನ ಪಿಎಚ್.ಡಿ ಮಾರ್ಗದರ್ಶಕರಾದ ಗುರು ಪ್ರೊ॥ ಎಚ್.ಎಸ್. ಹರಿಶಂಕರ ಅವರಿಗೆ ಈ ಮಂಗಳ ಕೃತಿಯನ್ನು ಅರ್ಪಿಸಿರುವೆನು.

ನಮ್ಮ ದ.ರಾ. ಬೇಂದ್ರೆ ಕಾವ್ಯಕೂಟದ ಎಲ್ಲ ಸದಸ್ಯರಿಗೆ ನನ್ನ ಮನಃಪೂರ್ವಕ ವಂದನೆಗಳು. 'ಹರಿಶ್ಚಂದ್ರ ಕಾವ್ಯ' ವನ್ನು ವಾಚನ ಮಾಡುವಾಗ ಆಸಕ್ತಿಯಿಂದ ಕೇಳಿ; ಗದ್ಯರೂಪದಲ್ಲಿ ಬರೆಯುವಾಗ ತುಂಬು ಪ್ರೋತ್ಸಾಹ ನೀಡಿದ ನನ್ನ ಪತ್ನಿ, ಮಕ್ಕಳು, ಅಳಿಯಂದಿರನ್ನು ನೆನೆಯುವುದು ಕುಟುಂಬ ಸಾಹಿತ್ಯ ಪೋಷಕ ವಾತಾವರಣದ ಆಹ್ಲಾದ!

ಈ ಕೃತಿಯನ್ನು ಪ್ರಕಟಿಸಿರುವ ವಂಶಿ ಪಬ್ಲಿಕೇಷನ್ಸ್‌ನ ಶ್ರೀ ಎನ್. ಪ್ರಕಾಶ್ ಅವರಿಗೆ ಮತ್ತು ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯ ಮಾಲೀಕರಾದ ಶ್ರೀ ಮಂಜು ಮತ್ತು ಸಿಬ್ಬಂದಿಗೆ ನನ್ನ ವಂದನೆಗಳು.

ನಾನು ಈ ಮೊದಲು ರಚಿಸಿರುವ ಕೃತಿಗಳನ್ನು ಓದಿಸವಿದ ಕನ್ನಡ ಕಾವ್ಯರಸಿಕರು ಮತ್ತು ವಿದ್ವನ್ಮಣಿಗಳು 'ವಚನ ಹರಿಶ್ಚಂದ್ರ ಚಾರಿತ್ರ' ವನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ.

ದಿನಾಂಕ : ೧೮-೩-೨೦೧೬ **ಡಾ. ಜಿ. ಕೃಷ್ಣಪ್ಪ**
ಬೆಂಗಳೂರು

# ಪರಿವಿಡಿ

# ಚಿತ್ರಗಳ ಅನುಕ್ರಮಣಿಕೆ

# ರಾಜ ಹರಿಶ್ಚಂದ್ರ

ಮನೋಹರವಾದ ಸಮುದ್ರದಿಂದ ಸುತ್ತುಗಟ್ಟಿದ ಧರೆಯ ಮಧ್ಯದಲ್ಲಿ ಮೇರುಪರ್ವತವಿದೆ. ಹಲವಾರು ವರ್ಷಗಳ ಹಿಂದೆ ಅದರ ದಕ್ಷಿಣ ದಿಕ್ಕಿನಲ್ಲಿ ಲಾಳದೇಶವಿತ್ತು. ಅದು ಪುಷ್ಪಶರ ಮನ್ಮಥನ ವಿಹಾರಸ್ಥಳದಂತಿತ್ತು. ಅದು ಸಕಲ ಸಂಪತ್ತಿನ ಜನ್ಮಭೂಮಿ, ವಾಣಿ ಸರಸ್ವತಿದೇವಿಯ ನೆಲೆವೀಡು, ಮಂಗಳಕಾರ್ಯಗಳ ಆಶ್ರಯಸ್ಥಾನ, ಶ್ರೀ ಲಕ್ಷ್ಮೀದೇವಿಯ ರಾಜಧಾನಿ ಎಂಬಂತೆ ಶೋಭಿಸುತ್ತಿತ್ತು. ಅದು ವೇದಶಾಸ್ತ್ರ ಪಂಡಿತರ, ಭಕ್ತಜನರ ಆಗರವಾಗಿತ್ತು. ಆ ಲಾಳದೇಶದ ಮಧ್ಯದಲ್ಲಿ ಪರಾಕ್ರಮಿ ಭೂಪಾಲರೆಂದು ಹೆಸರುವಾಸಿಯಾದ ಸೂರ್ಯವಂಶದ ರಾಜರು ಆಳುತ್ತಿದ್ದರು. ಆ ಪೀಳಿಗೆಯ ರಾಜರಿಗೆ ವೀರಸಿರಿ ಒಲಿದು, ವೀರವೇದಿಕೆಯ ಮೇಲಿಟ್ಟ ರತ್ನಸಿಂಹಾಸನದಲ್ಲಿ ಅವರು ಪ್ರಕಾಶಮಾನರಾಗಿದ್ದರು. ಅವರ ರಾಜಧಾನಿ ಅಯೋಧ್ಯಾನಗರವು ಮೂರು ಲೋಕಗಳಲ್ಲಿ ತನಗೆ ಸಾಟಿ ಇಲ್ಲ ಎಂಬ ಕೀರ್ತಿಯಿಂದ ಮೆರೆಯುತ್ತಿತ್ತು.

ಆ ನಗರದ ದುರ್ಗವು ಕಾಳಭೈರವನ ಕದನದ ಕಣವೋ, ಪ್ರಳಯಕಾಲದ ಸಮರ್ಥಸಿಡಿಲ ಹೋಳೋ, ರವಿಕುಲದ ವೈರಿಗಳ ಕೀರ್ತಿಯೆಂಬ ಶಶಿಯನ್ನು ಹಿಡಿವ ರಾಹುವಿರುವ ಕುಕ್ಕೆಯೋ ಎಂಬಂತಿತ್ತು. ಅದು ಹರಿಶ್ಚಂದ್ರ ಭೂಪಾಲನ ಪ್ರಬಲ ಪ್ರತಾಪ ಶರಧಿಯ ಸುಳಿಯೋ ಎಂಬಂತೆ ಭಯಂಕರ ಆಕಾರದಿಂದ ಕಂಗೊಳಿಸುತ್ತಿತ್ತು. ಆ ಕೋಟೆಯ ಮೇಲೆ ಕಟ್ಟಿರುವ ಅಟ್ಟಣೆಯು ದೇವತೆಗಳ ನಗರಕ್ಕೆ ದಾಳಿಯಿಡಲು ತಂದಿಟ್ಟ ನಿಚ್ಚಣಿಕೆಗಳಂತಿದ್ದವು! ಕೊತ್ತಳಗಳು ಆಕಾಶದಲ್ಲಿ ನಡೆದು ಬೆಂಡಾದ ಗಂಧರ್ವರು ಹತ್ತಿರ ಬಂದು ವಿಶ್ರಾಂತಿ ಪಡೆಯಲೆಂದು ರಚಿಸಿರುವ ಮಹಡಿಗಳಂತಿದ್ದವು! ಡೆಂಕಣಿಗಳು ವೈರಿಗಳನ್ನು ವೇಗವಾಗಿ ಹಿಂಬಾಲಿಸಲು ಎತ್ತಿದ ಹಲವು ಕೈಗಳಂತಿದ್ದವು! ಕೋಟೆಯ ಸುತ್ತಲೂ ವಿಶೇಷವಾಗಿ ಹರಡಿಕೊಂಡಿರುವ ಕಂದಕವು ಆ ಪುರದ ಆವರಣದಂತಿತ್ತು!

ಅಮರಾವತಿಯ ಸೊಬಗು, ಅಲಕಾಪುರಿಯ ಸಂಪತ್ತು, ಮಧುರಾಪುರದ ಮಂಗಳ, ಶೋಣಿತಪುರದ ದರ್ಪ, ಲಂಕಾಪುರದ ಕೀರ್ತಿ, ಯಮಪುರದ ರೌದ್ರತ್ವ, ಸರ್ಪಲೋಕದ ರಚನೆ, ಇಂದ್ರಪ್ರಸ್ಥಪುರದ ಬಲವನ್ನು ಒಟ್ಟಾಗಿಸಿದ ಪಡಿಯಚ್ಚಾಗಿ – ಬ್ರಹ್ಮನು ನಿರ್ಮಿಸಿರುವನೆಂಬಂತೆ ಅಯೋಧ್ಯಾಪುರದ ದುರ್ಗವು ಶೋಭಿಸುತ್ತಿತ್ತು.

ಇಂದ್ರನ ಭೋಗ, ಅಗ್ನಿಯ ತೇಜಸ್ಸು, ಯಮನ ಪರಾಕ್ರಮ, ನೈಋತಿಯ ಕೋಪ, ರತ್ನಾಕರೇಶ್ವರನ ಗಂಭೀರ, ವಾಯುವಿನ ಬಲ, ಕುಬೇರನ ಸಿರಿ, ರುದ್ರನ ಉಗ್ರತ್ವ, ಸೂರ್ಯನ ಪ್ರಭೆ, ಧರೆಯ ಧೈರ್ಯ, ಚಂದ್ರನ ಶಾಂತಿಗಳೆಲ್ಲವೂ ಸೇರಿ ರೂಪಾಗಿದೆಯೊ ಎನಿಸುವ ಹರಿಶ್ಚಂದ್ರ ರಾಜನು ಅಯೋಧ್ಯಾಪುರಕ್ಕೆ ಒಡೆಯನಾಗಿದ್ದನು. ಆತ ವೈರಿಗಳೆಂಬ ಸಮುದ್ರಕ್ಕೆ ಬಡಬಾಗ್ನಿಯಾಗಿ, ಶತ್ರುಗಳೆಂಬ ಗಜಗಳಿಗೆ ಸಿಂಹಸ್ವರೂಪಿಯಾಗಿದ್ದನು.

ಹರಿಶ್ಚಂದ್ರ ಭೂವರನ ದೇಹಕಾಂತಿಯ ಮುಂದೆ ಸೂರ್ಯನಕಾಂತಿ ಕಪ್ಪು ಕಪ್ಪು! ಅವನ ಕೋಪದ ಎದುರು ಬಡಬಾಗ್ನಿ ತಣ್ಣ ತಣ್ಣನೆ! ಕೊಡುವ ಕೈಯ ಮುಂದೆ ಅಮರತರು ಮೆಲ್ಲ ಮೆಲ್ಲನೆ! ಅವನ ಮೋಹನವು ಅಪ್ಪಿದ ಘನರೂಪಿನ ಎದುರು ಮನ್ಮಥನ ರೂಪು ಕೀಳು ಕೀಳು! ಗಾಂಭೀರ್ಯದ ಎದುರು ಸಮುದ್ರವು ತೆಳ್ಳ ತೆಳ್ಳನೆ! ಶಾಂತಿಯ ಎದುರು ಶಶಿಯು ಬೆಚ್ಚ ಬೆಚ್ಚನೆ!

ಆ ರಾಜನು ತನ್ನ ಬಳಿಗೆ ಬಂದವರಿಗೆ, ಬಯಸಿದವರಿಗೆ, ಸೋಂಕಿದವರಿಗೆ, ಸೇರಿದವರಿಗೆ ತನ್ನಂತೆ ಅಭ್ಯುದಯವನ್ನು ಹೊಂದುವಂತೆ ಮಾಡುತ್ತಿದ್ದನು. ಅದನ್ನು ಕಂಡು ಚಂದನವು ನಾಚಿ, ಸಿಗ್ಗಾಗಿ, ಕುಗ್ಗಿ ಮರವಾಗಿ ಹೋಯಿತು! ಕಲ್ಪವೃಕ್ಷ ಸ್ವರ್ಗಸ್ಥವಾಯಿತು! ಕಾಮಧೇನುವು ಮೂಕವಾಯಿತು! ಸ್ಪರ್ಶಮಣಿ ಕಲ್ಲಾಯಿತು! ಸಿದ್ಧರಸವು ಕರಗಿ ಹೋಯಿತು!

ಹರಿಶ್ಚಂದ್ರನ ಸಾಹಸವು – ಅಷ್ಟ ದಿಕ್ಪಾಲಕರಾದ ಇಂದ್ರ, ಅಗ್ನಿ, ಯಮ, ನಿರುತಿ, ವರುಣ, ಮರುತ, ಕುಬೇರ, ಈಶಾನ್ಯರನ್ನು ಪರಾಜಯಗೊಳಿಸಿ ಅವರ ವಜ್ರಾಯುಧ, ಖಡ್ಗ, ಶೂಲ ಮುಂತಾದ ಆಯುಧಗಳೊಡನೆ ಅವರ ವಾಹನಗಳಾದ ಆನೆ, ಟಗರು, ಕೋಣಗಳ ಸಮೇತ ಸೆಳೆದು ತರುವುದಾಗಿತ್ತು.

ಹರಿಶ್ಚಂದ್ರ ಭೂಪಾಲನ ಅರಸಿ ಚಂದ್ರಮತಿ ರೂಪಿನಲ್ಲಿ ರತಿಗೆ, ಸೌಭಾಗ್ಯದಲ್ಲಿ ಲಕ್ಷ್ಮಿಗೆ ಪ್ರತಿಸ್ಪರ್ಧಿಯಾಗಿ; ಜಾಣತನದಲ್ಲಿ ಸರಸ್ವತಿಗೆ ಸಮಾನಳಾಗಿದ್ದಳು. ಅವಳು ಸಚ್ಚರಿತದಲ್ಲಿ ಸುರನದಿ ಗಂಗೆಗೆ, ಪತಿಭಕ್ತಿಯಲ್ಲಿ ಅರುಂಧತಿಗೆ, ಕೀರ್ತಿಯಲ್ಲಿ ರೋಹಿಣಿಗೆ, ವಂದ್ಯತೆಯಲ್ಲಿ ಗಾಯತ್ರಿಗೆ ಸರಿಜೋಡಿಯೆನಿಸಿ ಕಂಗೊಳಿಸುತ್ತಿದ್ದಳು.

ಹರಿಶ್ಚಂದ್ರ ರಾಜನ ಕುಮಾರ ಲೋಹಿತಾಶ್ವನು ಪ್ರತಿಭಟಿಸುವ ರಾಜರನ್ನು ಒರಸಿಹಾಕುವೆನೆಂದು ನುಡಿನುಡಿದು ನುಡಿ ಕಲಿತನು. ಯುದ್ಧರಂಗದಲ್ಲಿ ಎದುರಾದವರ ಸರ್ವಸ್ವವನ್ನು ಹಿಡಿಹಿಡಿಯುವೆ ಎಂದು ಹಿಡಿದು ನಡೆಯುವುದನ್ನು ಕಲಿತನು. ವೈರಿಗಳ ಬೈತಲೆಯ ಹಾದಿಯಲ್ಲಿ ನಡೆನಡೆವೆ ಎಂದು ನಡೆಯನ್ನು ಕಲಿತನು. ಶತ್ರುಗಳಲ್ಲಿ ಕಪ್ಪವನ್ನು ಬಿಡಬಿಡದೆ ಪಡೆಯುವೆ ಎಂದು ಉಣ್ಣುವುದನ್ನು ಕಲಿತನು. ಕೀರ್ತಿಯೊಡನೆ ಓಡಾಡುತ್ತ ಓಡಾಡುವುದನ್ನು ಕಲಿತು ಸರ್ವಜನರ ಮುದ್ದಾಗಿದ್ದನು.

ಹರಿಶ್ಚಂದ್ರ ದೊರೆಗೆ ಸತ್ಯಕೀರ್ತಿ ಎಂಬ ಬುದ್ಧಿವಂತನು ಪ್ರಧಾನಿಯಾಗಿದ್ದನು. ಅವನು ದೊರೆಯ ಹಿತ ಕಾಪಾಡುತ್ತ ಪುರದ ಜನರ ಕಾರ್ಯಗಳಲ್ಲಿ ಸಂಭ್ರಮದಿಂದಿದ್ದು,

ದೇಶದ ಉನ್ನತಿಯತ್ತ ಸದಾ ಗಮನ ಕೊಟ್ಟಿದ್ದನು. ಅವನು ದುಷ್ಟರ ಎದೆಗೆ ಕಿಚ್ಚಾಗಿ, ಶಿಷ್ಟರಿಗೆ ಆನಂದವನ್ನುಂಟು ಮಾಡುತ್ತ ಅತಿ ಚತುರನಾಗಿದ್ದನು. ಅವನು ಅರವತ್ತನಾಲ್ಕು ವಿದ್ಯೆ, ಸಾಮ ಭೇದಾದಿ ಮಂತ್ರಾಲೋಚನೆಯಲ್ಲಿ ಪರಿಣತನಾಗಿದ್ದನು. ಅವನು ಈಶ ಭಕ್ತಿಯುಳ್ಳವನು, ವೀರನು, ಉದಾರಗುಣನು ಆಗಿದ್ದು ಪುಣ್ಯನೀತಿ ನಡೆಯೆಲ್ಲವೂ ಒಟ್ಟುಗೂಡಿ ರೂಪಾಯಿತೊ ಎಂಬಂತಿದ್ದನು.

ಹರಿಶ್ಚಂದ್ರ ಭೂಭುಜನ ಸೇವೆಯಲ್ಲಿ ಮಹಾ ಪರಾಕ್ರಮಿಗಳಾದ ಎಂಬತ್ತು ಪದ್ಮನಾಯಕರಿದ್ದರು. ಆ ನಾಯಕರು ಭೂಮಿಯನ್ನು ಬಗೆದು ಆದಿಶೇಷನನ್ನು ಸೆಳೆಯುವ, ಸಮುದ್ರವನ್ನು ಹಿಡಿದು ಅದರಲ್ಲಿರುವ ಬಡಬಾಗ್ನಿಯನ್ನು ಹಿಡಿಯುವ, ಗಿರಿಗಳನ್ನು ಸೀಳುವ, ಹಗಲೊಡೆಯ ಸೂರ್ಯನನ್ನು ಹಿಮ್ಮೆಟ್ಟಿಸುವ, ಮೃತ್ಯುವನ್ನು ಅಡಗಿಸುವ ಶೂರರಾಗಿದ್ದರು! ಅವರು ದಿಕ್ಪಾಲಕರನ್ನು ಆಕ್ರಮಿಸಿ, ಸಿಡಿಲನ್ನು ಹುಡಿಗೈದು, ದಿಗ್ಗಜಗಳ ಕೊಂಕಿದ ದಾಡೆಗಳನ್ನು ಮುರಿಯುವ, ನಕ್ಷತ್ರಗಳನ್ನು ಧ್ವಂಸ ಮಾಡುವ ಸಾಹಸಿಗಳಾಗಿದ್ದರು! ಇನ್ನು ಉಳಿದ ಮಹಾಸೇನೆಯು ಊಹಿಸಲು ಸಾಧ್ಯವಿಲ್ಲದಷ್ಟು ಅಗಾಧವಾಗಿತ್ತು!

ಆ ರಾಜನ ಅರಸುತನದ ಹಿರಿಮೆಯನ್ನು ವರ್ಣಿಸುವುದೆಂದರೆ – ಅವನ ತ್ಯಾಗಕ್ಕೆ ಪಂಡಿತರು, ವಿದ್ವಾಂಸರು ತೃಪ್ತರಾಗುವುದೇ ಅವಧಿಯಾಗಿ; ರಾಜ್ಯಕ್ಕೆ ಏಳು ಸಾಗರಗಳೇ ಮೇರೆಯಾಗಿದ್ದವು. ಅವನ ಭಕ್ತಿಗೆ ಈಶ್ವರನನ್ನು ತಲೆದೂಗಿಸುವುದೇ ಬಲವಾಗಿ, ಕೀರ್ತಿ ಅಂಗನೆಯ ಸಂಚಾರಕ್ಕೆ ಮೂರು ಲೋಕಗಳೇ ಮೇರೆಯಾಗಿದ್ದವು. ಅವನ ವಿಪುಲ ಭೋಗಕ್ಕೆ ಸರ್ವಸುಖವೇ ಅವಧಿಯಾಗಿ; ವೀರಕ್ಕೆ ಭೂಭಾಗದಲ್ಲಿ ಅಡ್ಡಿಯಿಲ್ಲದಿರುವುದೇ ಮೇರೆಯಾಗಿತ್ತು!

# ವಸಿಷ್ಠ ವಿಶ್ವಾಮಿತ್ರರ ವಿವಾದ

ಸ್ವರ್ಗದ ದೇವೇಂದ್ರನ ರಾಜಧಾನಿ ಅಮರಾವತಿ. ಅದು ಸ್ಪರ್ಶಶಿಲೆಯ ಅಂಗಳ, ಕರೆಯುವಹಸು ಕಾಮಧೇನು, ಕಲ್ಪತರು ವನಗಳಿಂದ ಶೋಭಿಸುತ್ತಿತ್ತು. ಅಲ್ಲಿ ಅಮರರ ಕ್ರೀಡಾಶೈಲವಾಗಿ ಮೇರುಪರ್ವತವಿದ್ದು ಅಮೃತವು ಅವರ ಆಹಾರವಾಗಿತ್ತು. ಅದರ ರಕ್ಷಕ ದೇವೇಂದ್ರ, ಅವನ ರಾಣಿ ಶಚಿ, ವೇಶ್ಯೆ ರಂಭೆ. ಅವನ ಆನೆ ಐರಾವತ, ಆಯುಧ ವಜ್ರಾಯುಧವಾಗಿದ್ದು ಭಂಡಾರವು ನವನಿಧಿಗಳಿಂದ ತುಂಬಿತ್ತು. ಅವನು ಒಂದು ರಾತ್ರಿ ಓಲಗವನ್ನು ಕರೆದನು.

ಆ ಸಭೆಯಲ್ಲಿ ಸುರ, ವಿದ್ಯಾಧರ, ಕಿನ್ನರ, ಖೇಚರ, ಯಕ್ಷ, ಗಂಧರ್ವ, ತುರಗವದನ, ಮಯೂರ, ನಾಗ, ಸಿದ್ಧ, ಧರಾಚರ, ಗರುಡ, ಕಿಂಪುರುಷರ ಮುಖ್ಯಸ್ಥರು ತಮ್ಮ ತಮ್ಮ ಸ್ಥಾನಗಳಲ್ಲಿ ಕ್ರಮವರಿತು ಕುಳಿತಿದ್ದರು. ಅವರ ನಟ್ಟನಡುವೆ ರತ್ನಖಚಿತವಾದ ಸಿಂಹಾಸನದಲ್ಲಿ ಅನಿಮಿಷನಾದ ಇಂದ್ರನು ಆಸೀನನಾಗಿದ್ದನು. ಅವನ ಹಿಂದೆ ಮುಂದೆ, ಎಡಬಲಗಳಲ್ಲಿ ಕಿರೀಟ ಧರಿಸಿ ಆಯುಧಗಳನ್ನು ಹಿಡಿದ ಸಮರ್ಥಯೋಧರು ಸುತ್ತುವರಿದಿದ್ದರು.

ಅಲ್ಲಿನ ಅಪ್ಸರೆಯರ ಬಂಗಾರದ ಆಭರಣಗಳ ಪ್ರಕಾಶದಲ್ಲಿ, ಅವರ ನಗೆ ಕಣ್ಣುಗಳಲ್ಲಿ ಹುಟ್ಟಿ ಮಂದ್ಯೈಸಿ ಬೆಳೆದ ಕಾಂತಿಯಲ್ಲಿ ಶಚೀಸತಿಯ ಗಂಡ, ರಂಬೆಯ ರಸಿಕ ಇಂದ್ರನು ರಾರಾಜಿಸುತ್ತಿದ್ದನು!

ಆ ಒಡ್ಡೋಲಗದಲ್ಲಿ ಸನಕ, ಕಶ್ಯಪ, ಜಹ್ನು, ಜಮದಗ್ನಿ, ಭೃಗು, ಶುಕ, ಅತ್ರಿ, ವಾಲ್ಮೀಕಿ, ಜೈಮಿನಿ, ಭರದ್ವಾಜ, ರೋಮಜ, ಭಗೀರಥ, ಕುಶಾವರ್ತ, ನಾರದ, ಮನು, ಮತಂಗ, ವ್ಯಾಸ, ಗರ್ಗ, ಗೌತಮ, ಅಗಸ್ತ್ಯ, ದಧೀಚಿ, ಪೌಲಸ್ತ್ಯ, ಮಾಂಡವ್ಯ ಮುಂತಾದ ಮುನಿ ಮುಖ್ಯರು ಇದ್ದರು. ಅವರ ನಡುವೆ ಮುನಿಕುಲದಲ್ಲಿ ಶ್ರೇಷ್ಠರಾದ ವಿಶ್ವಾಮಿತ್ರ ವಸಿಷ್ಠರಿದ್ದರು. ಅವರಿಬ್ಬರು – ಶರೀರವನ್ನು ಆವರಿಸಿರುವ ಅಂಗೋಪಾಂಗ ಸಮೂಹಗಳ ನಡುವಿರುವ ಎರಡು ಕಣ್ಣುಗಳಂತೆ, ನವಗ್ರಹಗಳ ನಡುವಿರುವ ಸೂರ್ಯ ಚಂದ್ರರಂತೆ, ಭೂಮಿಯಲ್ಲಿ ಹರಿಯುವ ನಾನಾ ನದಿಗಳಲ್ಲಿ ಪ್ರಕಾಶ ಮಾನವಾಗಿರುವ ಗಂಗೆ ತುಂಗಭದ್ರೆಗಳಂತೆ ಆ ಸಭೆಯಲ್ಲಿ ಶೋಭಿಸುತ್ತಿದ್ದರು.

ಅಮರಾವತಿಯ ದೊರೆ ಇಂದ್ರನು ವಸಿಷ್ಠರನ್ನುದ್ದೇಶಿಸಿ,

'ಎಲೆ ಮುನಿ ಶ್ರೇಷ್ಠ, ಸಮಸ್ತ ಭೂಮಂಡಲವನ್ನು ಆಳುವ ರವಿಕುಲಜರಾದ ಇಕ್ಷ್ವಾಕು ವಂಶದ ಅರಸುಗಳಲ್ಲಿ ಬಲಾಢ್ಯರು ಯಾರು? ಮನ ವಚನ ಕಾಯದೊಳಗೆ ಒಮ್ಮೆಯೂ ಹುಸಿ ಹೇಳದಂತೆ ನಡೆವ ವೀರರು ಯಾರು? ಅವರ ಪರಂಪರೆಯ ರಾಜಗುರು ನೀನಾಗಿರುವೆ. ಅವರೆಲ್ಲರನ್ನೂ ನೀನು ಚೆನ್ನಾಗಿ ತಿಳಿದಿರುವೆ' ಎಂದು ಕೇಳಲು ವಸಿಷ್ಠಮುನಿಯು ಹೀಗೆ ಹೇಳಿದನು.

'ಇಂದ್ರನೇ, ನಾನು ಬಲ್ಲ ಇಕ್ಷ್ವಾಕು ವಂಶದ ಹದಿನಾಲ್ಕು ಜನ ರಾಜರುಗಳಲ್ಲಿ ಇಂದಿನ ತನಕ ಸುಳ್ಳು ಆಡಿದವರು ಇಲ್ಲ. ಆದರೆ ಅವರನ್ನು ಉದ್ಧರಿಸಲೆಂದೇ ವಸುಧಾಧಿಪತಿ ಹರಿಶ್ಚಂದ್ರನು ಅವತರಿಸಿದ್ದಾನೆ. ಆತನ ಸತ್ಯದ ಪ್ರತಾಪವನ್ನು ಹೊಗಳಲು ನನ್ನಿಂದ ಸಾಧ್ಯವೆ? ಆದಿಶೇಷನಿಗೂ ಅದನ್ನು ವರ್ಣಿಸಲು ಸಾಧ್ಯವಿಲ್ಲ! ಶಶಿಮೌಳಿಯಾಣೆ!'

ಮುನಿ ಶ್ರೇಷ್ಠರಿಂದ ತುಂಬಿದ ಒಡ್ಡೋಲಗದಲ್ಲಿ ಇಂದ್ರನು ತನಗೆ ಮೊದಲು ಪ್ರಾಶಸ್ತ್ಯಕೊಟ್ಟು ಆದರಿಸಿ ಮಾತನಾಡಿಸದೆ ಇರುವ ಕೋಪ ಒಂದಾದರೆ; ವಸಿಷ್ಠ ಮುನಿ ಯಾವುದನ್ನೇ ಹೇಳಲಿ ಅದನ್ನು ಅಲ್ಲವೆಂದು ಸಾಧಿಸುವ ಮನಸ್ಸು ಎರಡನೆಯದಾಗಿ; ಅಖಿಲ ಜೀವಾವಳಿಯಲ್ಲಿ ದೋಷವನ್ನಲ್ಲದೆ ಲೇಸನ್ನು ಕಾಣದಿರುವ ಭಾವ ಮೂರನೆಯದಾಗಿದ್ದು ಅವೆಲ್ಲವೂ ಮುಪ್ಪುರಿಗೊಂಡು ಚಿಗುರೊಡೆದಂತೆ ಕಡುಕೋಪವು ವಿಶ್ವಾಮಿತ್ರನನ್ನು ಆವರಿಸಿತು. ಮುನಿದು ಕುದಿಯುತ್ತ ವಸಿಷ್ಠನನ್ನುದ್ದೇಶಿಸಿ,

'ನಿಲ್, ನುಡಿಯಬೇಡ' ಎಂದು ಹೇಳುತ್ತ, ಕಿಡಿಕಾರುತ್ತ ನುಡಿದನು. 'ಬೇಸರಗೊಳ್ಳದೆ ಕೇಳುವ ದೇವೇಂದ್ರನಿರುವನೆಂದು ಹೀಗೆ ಹೇಸದೆ ಅತಿ ಹರಟುವರೆ ವಸಿಷ್ಠ?'

'ನಾನು ಹರಟುತ್ತಿರುವೆನೆ? ಅವನು ಅಧಿಕನಲ್ಲದವನೆ? ನೀವೇ ಹೇಳಿ ವಿಶ್ವಾಮಿತ್ರರೆ.'

'ರಾಶಿ ಹೊನ್ನುಂಟು! ಅಧಿಕನವನು!'

'ಈ ಸಭೆಯಲ್ಲಿ ಹೊನ್ನ ಮಾತೇಕೆ? ಸತ್ಯನೆ? ಹೇಳು?'

'ಅವನು ಆಳುವ ದೇಶದಲ್ಲಿ ಸತ್ಯವನ್ನಂತೂ ನಾನು ಕೇಳಿ ತಿಳಿದಿಲ್ಲ!' ಎಂದು ಕೌಶಿಕನು ಕೊಂಕುನುಡಿಯಿಂದ ವಸಿಷ್ಠನನ್ನು ತಿವಿದನು. ಅದಕ್ಕೆ ಉತ್ತರವಾಗಿ ವಸಿಷ್ಠನು,

'ಶಿವನು ಬಲ್ಲಂತೆ ಹರಿಶ್ಚಂದ್ರನು ಸತ್ಯವಂತನು. ಅವನು ಆಳುವ ರಾಜ್ಯದಲ್ಲಿ ಅಸತ್ಯ, ಅನ್ಯಾಯ, ಅಶಿಸ್ತು, ಅವಿಚಾರ, ದುರ್ನೀತಿ, ದುಸ್ಸಂಗ, ದುಸ್ಥಿತಿ, ದುರಾಚಾರಗಳಿಲ್ಲ.'

'ಮುನಿನಾಥ ವಸಿಷ್ಠರೆ, ಬೇರುಬಲ್ಲವನಿಗೆ ಎಲೆ ತೋರಿಸುವುದೇಕೆ? ನಿನ್ನ ರಾಜನು ಆಳುವ ರಾಜ್ಯವನ್ನು ನಾನು ಚೆನ್ನಾಗಿ ಸುತ್ತಾಡಿದ್ದೇನೆ. ನನಗೆಲ್ಲವೂ ತಿಳಿದಿದೆ. ಅದನ್ನು ಹೇಳುವೆನು ಕೇಳು' ಎಂದು ಮಾತು ಮುಂದುವರೆಸುತ್ತ 'ಅಲ್ಲಿ ಉನ್ನತ

ವಿಚಾರವೆಂದರೆ ಕಾಡಿನಲ್ಲಿರುವ ಎತ್ತರವಾದ ಮರಗಳು! ಪಶುಭಕ್ತಿಯೆಂದರೆ ಪಶುಪಾಲಕರು ಗೋವುಗಳಿಗೆ ತೋರುವ ಭಕ್ತಿ! ದ್ವಿಜೋಪಚಾರವೆಂದರೆ ಶರೀರದಲ್ಲಿ ಎರಡನೆ ಹುಟ್ಟು ಪಡೆದ ಹಲ್ಲುಗಳ ಉಪಚಾರ! ಧರ್ಮಶ್ರವಣವೆಂದರೆ ಅಂತ್ಯಕಾಲದಲ್ಲಿ ಯಮನ ಸುದ್ದಿ ಕೇಳುವುದು! ಸ್ವಸ್ಥತೆಯೆಂದರೆ ಸ್ವರ್ಗವಾಸ! ಇದು ಹೊರತು ಉನ್ನತ ಗುಣಗಳು ಆ ರಾಜ್ಯದಲ್ಲಿ ಕಾಣವು!' ಎಂದು ಹೇಳಿದನು.

**ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು**

'ಕೋಣಗಳೆರಡು ಹೋರಾಡುವಾಗ ಗಿಡಕ್ಕೆ ಮೃತ್ಯು' ಎಂದುಲೋಕದ ಜನ ಹೇಳುವ ಗಾದೆಯಂತೆ – ವಿಶ್ವಾಮಿತ್ರನು ಹರಿಶ್ಚಂದ್ರ ರಾಜನ ತಪ್ಪನ್ನು ಹಿಡಿದರೆ, ವಸಿಷ್ಠನು ಅವನ ಸತ್ಯವನ್ನು ಕೊಂಡಾಡುವನು. ಈ ಇಬ್ಬರ ಜಗಳ ಹರಿಶ್ಚಂದ್ರ ರಾಜನ ಕಷ್ಟಕ್ಕೆ ಮೂಲವಾಗುವುದೆಂದು ತಿಳಿದು ಅಸಮಾಧಾನಗೊಂಡ ಇಂದ್ರನು,

'ಮುನಿಶ್ರೇಷ್ಠರೆ, ನಾನು ಏನನ್ನೊ ಕೇಳಿದರೆ, ನೀವೇನೊ ಆಡುವಿರಿ. ಇಳೆಯ ಭೂನಾಥರಲ್ಲಿ ಸತ್ಯಸಂಧರು ಯಾರೆಂದು ಕೇಳಿದರೆ, ದೇಶದ ವೃತ್ತಾಂತವಾದ ನಾಡಮಾತನ್ನು ಮಾರುತ್ತರವಾಗಿ ನೀಡುವುದೆ?' ಎಂದು ಪ್ರಶ್ನಿಸಲು ವಸಿಷ್ಠನು,

'ಯಾರು ಏನೇ ಹೇಳಿದರು ಹರಿಶ್ಚಂದ್ರನೇ ಸತ್ಯಸಂಧನು' ಎಂದು ಉತ್ತರಿಸಿದನು. ತಕ್ಷಣ ವಿಶ್ವಾಮಿತ್ರನು ಗುಡುಗಿದನು :

'ಅಲ್ಲ! ನಿಲ್ಲು! ನಾನು ತಿಳಿದಂತೆ ಆ ನೃಪನು ಅಸತ್ಯನು. ಅವನ ಮಾತು ಈ ಸಭೆಯೊಳೇಕೆ?'

ಆಗ ಶಾಂತ ಚಿತ್ತದಿಂದ ವಸಿಷ್ಠ ಮುನಿಯು ಹೇಳಿದನು.

'ಭೂಮಿಯು ರಸಾತಳಕ್ಕಿಳಿದು ಶಶಿ ಬಿಸಿಯಾಗಿ, ಮೇರುಗಿರಿ ಚಲಿಸಿ, ರವಿ ಕಳೆಗುಂದಿ, ಜಲನಿಧಿ ಬತ್ತಿ, ಬೆಂಕಿ ತಣ್ಣಗಾದ ದಿನದಲ್ಲಿಯೂ ಸತ್ಯನಿಧಿ ಹರಿಶ್ಚಂದ್ರರಾಯನ ವಾಕ್ಯದಲ್ಲಿ ಹುಸಿಗಳು ಮೊಳೆಯುವುದಿಲ್ಲ. ಇದು ನಿಶ್ಚಯ. ನಾನು ತಿಳಿದ ಹಾಗೆ ಅವನ ಸತ್ಯವನ್ನು ತಿಳಿಯಲು ನೊಸಲಕಣ್ಣುಳ್ಳ ಶಿವನೇ ಆಗಬೇಕು! ಉಳಿದವರಿಗೆ ಸಾಧ್ಯವಿಲ್ಲ!'

'ವಸಿಷ್ಠ ಮುನಿಗಳೆ, ಸತ್ಯ ಮಾತ್ರ ಒಂದಿದ್ದರೆ ಆಗದು. ಸತ್ಯಸಾಧನೆಗಾಗಿ ಹಲವು ದುರ್ಗುಣಗಳನ್ನು ಬಿಡಬೇಕು.'

'ಬಿಡಬೇಕಾದ ದುರ್ಗುಣಗಳನ್ನು ತಿಳಿಸಿ.'

'ಲೋಭ, ತೀವ್ರ ಭೀತಿ, ನಿಷ್ಕರುಣೆ, ಮೂರ್ಖತ್ವ, ಜಡತ್ವ'

'ಓಹ್ ವಿಶ್ವಾಮಿತ್ರ ಮುನಿವರ್ಯರೆ, ಕನಕದಲ್ಲಿ ಕಂಪನ್ನು, ಮಾಣಿಕ್ಯದಲ್ಲಿ ರಸವನ್ನು,

ಚಂದನದಲ್ಲಿ ಬಿಸಿಯನ್ನು ಹುಡುಕಬಹುದೆ? ಹರಿಶ್ಚಂದ್ರನು ಸತ್ಯಸಂಧನೆಂದು ನಾನು ಹೊಗಳಿದರೆ ಅವನಲ್ಲಿ ಈ ದೋಷಗಳನ್ನು ಹುಡುಕುವುದೆ?'

'ಲೋಭ ಮುಂತಾದ ದುರ್ಗುಣಗಳಿದ್ದರೆ ಅವನೆಂತಹ ಸತ್ಯವಂತ?'

'ಮಾನ್ಯ ವಿಶ್ವಾಮಿತ್ರರೆ, ಕೇಳಿ. ಹರಿಶ್ಚಂದ್ರ ರಾಜನು ತನ್ನನ್ನು ಎದುರಿಸಲು ಬಂದ ವೈರಿಗಳಿಗೆ ಬೆನ್ನು ತೋರಿಸದ ನೀತಿಯಲ್ಲಿ ಅತಿ ಲೋಭಿ! ದುರ್ಜನರ ಮಾತನ್ನು ಕೇಳದ ರೀತಿಯಲ್ಲಿ ಅತಿ ಮೂರ್ಖ! ಪರವನಿತೆಯರನ್ನು ನೋಡುವ ಬಗೆಯಲ್ಲಿ ಅತಿ ಭೀತ! ಈಶ್ವರನ ಭಕ್ತಿಯನ್ನು ಬಯಸುವ ಕ್ರಮದಲ್ಲಿ ಅತಿದೀನ! ವಿದ್ವಾಂಸರ ಬಯಕೆಯನ್ನು ಕೊಲ್ಲುವುದರಲ್ಲಿ ನಿಷ್ಕರುಣಿ! ಅಧರ್ಮ ಪಥದಲ್ಲಿ ನಡೆಯಲಾರನು ಎಂಬುದೆ ಜಡತ್ವ! ಇವಲ್ಲದೆ ಅವನಲ್ಲಿ ಬೇರೆ ಲೋಭಾದಿಗಳು ತಲೆದೋರವು!'

'ಓಹ್ ಮುನಿಶ್ರೇಷ್ಠರೆ, ನಿಮ್ಮ ಹರಿಶ್ಚಂದ್ರನು ತನಗೆ ಶೋಭಿಸುವ ಮಗನಿಲ್ಲದಿದ್ದರೆ ನರಕ ಪ್ರಾಪ್ತಿ ಎಂದು ವರುಣನಲ್ಲಿ ಮಗನನ್ನು ಕರುಣಿಸೆಂದು ಪ್ರಾರ್ಥಿಸಿದ. ವರುಣನು ಪ್ರಸನ್ನನಾಗಿ – ಪುತ್ರನ ವರವನ್ನು ನೀಡುತ್ತೇನೆ, ಆದರೆ ನನಗೆ ಆ ಮಗನನ್ನು ಯಾಗ ಪಶುವಾಗಿ ಒಪ್ಪಿಸಬೇಕು ಎಂದು ತಿಳಿಸಲು, ಶಿಶುವಾದರೆ ಸಾಕೆಂದು ಒಪ್ಪಿ ಹರಿಶ್ಚಂದ್ರ ಮಾತುಕೊಟ್ಟ. ಮಗನು ಹುಟ್ಟಿದ ಮೇಲೆ ಪುತ್ರವ್ಯಾಮೋಹದಿಂದ ಬಲಿಕೊಡಲಿಲ್ಲ. ಲೋಭಿಯಾಗಿ ಕಾಡಿನಲ್ಲಿ ಬೈಚಿಟ್ಟ. ವೇದದಲ್ಲಿರುವ ಈ ಘಟನೆಯನ್ನು ತಿಳಿದು ಅಂತಹವನನ್ನು ಹೊಗಳುವುದು ನಿಮ್ಮ ಉದ್ಧಟತನ' ಎಂದು ಹಿಂದಿನದನ್ನು ನೆನೆದು ವಿಶ್ವಾಮಿತ್ರನು ಕೋಪದಿಂದ ಮಾತನ್ನು ಮುಂದುವರಿಸಿ,

'ಹುಸಿದ ಹರಿಶ್ಚಂದ್ರನಿಗೆ ವರುಣನ ಕೋಪದ ದೆಸೆಯಿಂದ ಜಲೋದರ ರೋಗ ಉಂಟಾಯಿತು. ಆಗ ಕಂಗೆಟ್ಟು ಅಜಿಗರ್ತ ಮುನಿಯ ಮಗನಾದ ಶುನಶ್ಯೇಫನನ್ನು ಕೊಂಡುಕೊಂಡು ಬಂದು ಹೋಮವನ್ನು ಮಾಡಿ, ತನ್ನ ರೋಗವನ್ನು ಶಮನ ಮಾಡಿಕೊಂಡ ಪಾತಕ ಅವನು. ಅಂತಹವನನ್ನು ಹೇಸದೆ ಹೊಗಳುವುದೆ?' ಎಂದು ಹೇಳಿದನು.

ಆ ಬಿರುಸು ನುಡಿ ಕೇಳಿದ ವಸಿಷ್ಠನು ಹಿಂದಿನಂತೆ ಇಂದು ಹರಿಶ್ಚಂದ್ರನಿಲ್ಲ ಎಂಬುದನ್ನು ಅರಿತಿದ್ದು ಮಾರ್ನುಡಿದನು :

'ಹಲವು ಮಾತೇಕೆ? ಹರಿಶ್ಚಂದ್ರ ರಾಜನಲ್ಲಿ ಅಸತ್ಯವನ್ನು ಕಾಣಿಸಬಲ್ಲವರು ಈ ಜಗತ್ತಿನಲ್ಲಿ ಹಿಂದೆ ಹುಟ್ಟಿದವರಿಲ್ಲ. ಇನ್ನು ಮುಂದೆ ಹುಟ್ಟುವವರನ್ನು ಕಾಣೆ. ನಾನಿದನ್ನು ಬಲ್ಲೆನು. ಉಳಿದವರ ಹವಣಾವುದು?'

'ಬಾಯಿ ಯಿದೆಯೆಂದು ಅತಿಯಾಗಿ ಆಡದಿರು! ನಿಲ್ಲು!' ಎಂದು ಸಿಟ್ಟಿನಿಂದ ಮುಸುಗುಡುತ್ತ ವಿಶ್ವಾಮಿತ್ರನು ಮಾತು ಮುಂದುವರಿಸಿದನು, 'ಅವನದು ಸಮುದ್ರದವರೆಗೂ ವಿಸ್ತರಿಸುವ ಧರೆಯ ಅರಸುತನ. ಜೊತೆಗೆ ನಿನಗೆ ಹಿತವಾದ

ಶಿಷ್ಯ. ನಿನಗೆ ಬೇಕಾದಷ್ಟು ಹಣವನ್ನು ಕೊಡುತ್ತಾನೆ. ಅವನ ಆರೈಕೆಯಲ್ಲಿ ನೀನಿರುವೆ. ಹಾಗಾಗಿ ನೀನು ಎಷ್ಟೇ ಹೊಗಳಿ ನುಡಿದರು ಅದನ್ನು ಒಪ್ಪಲಾಗದು.'

'ರಾಜನು ನೀಡುವ ದಾನದಲ್ಲಿ ನಾನಿರುವೆನೆ?'

'ಮುನಿಯ ಬೇಡ. ಅವನು ಸುಳ್ಳು ಹೇಳಿದರೆ, ನಿನ್ನನ್ನು ಏನು ಮಾಡಬಹುದು?' ಎಂದು ಸವಾಲು ಎಸೆದ ವಿಶ್ವಾಮಿತ್ರನ ನುಡಿಗೆ ವಸಿಷ್ಠನು ಘೋರ ಪ್ರತಿಜ್ಞೆ ಮಾಡಿದನು:

'ವಿಶ್ವಾಮಿತ್ರ ಮುನಿಪುಂಗವನೆ ಕೇಳು. ಹರಿಶ್ಚಂದ್ರನು ಮರೆತು ಹುಸಿ ನುಡಿದರೆ– ಶ್ರುತಿ, ಮತ, ಕುಲಾಚಾರ, ಧರ್ಮ ಮಾರ್ಗ, ಮಹಾ ವ್ರತಾನುಷ್ಠಾನ, ಗುರುವಿನ ಆಜ್ಞೆ, ಲಿಂಗಾರ್ಚನೆ, ಉನ್ನತ ತಪಸ್ಸು, ಬ್ರಹ್ಮಚರ್ಯದಿಂದ ಬೆಳೆದ ನನ್ನ ಪುಣ್ಯ ಸಂಪಾದನೆಯನ್ನು ತೊರೆಯುವೆ! ಪತ್ನಿಯನ್ನು ತ್ಯಜಿಸುವೆ! ಅತಿ ದಿಗಂಬರನಾಗಿ, ಶಿಖೆ ಬಿಚ್ಚಿ ಹರಡಿ, ನರಕಪಾಲದಲ್ಲಿ ಸುರೆ ಸುರಿದು ಕುಡಿಯುತ್ತ ದಕ್ಷಿಣ ಮುಖವಾಗಿ ಹೋಗುವೆ!'

ಮುನಿದು ಎಲ್ಲವನ್ನು ಸುಟ್ಟೊಸೆದು ಮತ್ತೆ ಹುಟ್ಟಿಸಬಲ್ಲ ಸಮರ್ಥರಾದ ಮುನಿಗಳಿಬ್ಬರು ಶಾಂತಿಯನ್ನು ಕಳೆದುಕೊಂಡು ಕದನ ಮುಖಿಗಳಾದರು. ಅದನ್ನು ಕಂಡು ಒಡ್ಡೋಲಗದ ಎಲ್ಲರೂ ಅಚ್ಚರಿಗೊಂಡು ಮೂಕರಂತಾದರು! ಭೂಮಿ ಆಕಾಶವು ಒಂದನ್ನೊಂದು ಮುತ್ತಿಕಾಡುವಲ್ಲಿ ಚರಾಚರ ವಸ್ತುಗಳು ಉಳಿಯುವುದು ಹೇಗೆ? ಎಂಬ ಚಿಂತೆ ಉಂಟಾಯಿತು! ಸಭಾಸದರಿಗೆ – ಅಲ್ಲಿ ಇರಲು ಆಗದು, ಏಳಲು ಆಗದು, ನುಡಿಯಲು ಆಗದು, ನುಡಿಯದೆ ಇರಲು ಆಗದು, ಅಹುದು ಎನ್ನಲಾಗದು, ಅಲ್ಲವೆನ್ನಲಾಗದು – ಎಂಬ ರೀತಿಯ ಪ್ರತಿಬಂಧ ಉಂಟಾಗಿ ಚಿಂತೆ ಆವರಿಸಿತು.

## ಮ್ಲಾನವದನನಾದ ಇಂದ್ರ

ಋಷಿವರ್ಯರಿಬ್ಬರ ವಿವಾದದಿಂದ ಇಂದ್ರನು ಮ್ಲಾನವದನನಾದನು. ತನ್ನ ಮನಸ್ಸಿನಲ್ಲಿ ಹೀಗೆ ಯೋಚಿಸಿದನು : ಯಾರೊಬ್ಬರನ್ನು ಕುರಿತು ಹಿತವನ್ನು ನುಡಿದರೆ ಪಕ್ಷಪಾತವೆನ್ನುವರು. ಇಬ್ಬರ ವಾದವನ್ನು ತಿರಸ್ಕರಿಸಿದರೆ ಉಪೇಕ್ಷೆ ಮಾಡಿದನೆಂದು ತಿಳಿದು ನಮಗಿಂತ ಉತ್ತಮನೆ ಎನ್ನುವರು. ಹೊಗಳಿದರೆ ಉಪಚಾರದ ನುಡಿ ಎನ್ನುವರು. ಜರೆದರೆ ಧೂರ್ತನೆಂದು ಶಾಪವನ್ನು ಕೊಡುವರು. ತನಗೆ ಮೌನವೇ ಮಹಾ ಔಷಧ ಎಂದು ಸುಮ್ಮನಿದ್ದನು.

ಸಭೆಯಲ್ಲಿ ಮೌನ ಅಸಹನೆಯಿಂದ ಮಿಸುಕಾಡುತಿತ್ತು. ಆಗ ನಾರದನು ಎದ್ದುನಿಂತು ಗದರಿಸುವ ದನಿಯಲ್ಲಿ ಹೇಳಿದನು :

'ಕೌಶಿಕನೆ, ವಸಿಷ್ಠನಿಗೆ ಭಾಷೆಯನ್ನು ಕೊಡು.'

'ಕೊಡುತ್ತೇನೆ, ಕೇಳಿರಿ. ಭೂಲೋಕದಲ್ಲಿ ನಾಲ್ಕು ಯುಗಗಳು ಸಾವಿರ ಸಲ ಮರಳಿ ಬಂದರೆ ಬ್ರಹ್ಮನಿಗೆ ಒಂದು ದಿನ. ಆ ದಿನದ ರೀತಿ ಮೂವತ್ತು ದಿನಗಳಾದರೆ ಒಂದು ತಿಂಗಳು. ಅಂತಹ ಹನ್ನೆರಡು ತಿಂಗಳುಗಳಾದರೆ ಬ್ರಹ್ಮನಿಗೆ ಒಂದು ವರ್ಷ. ಅಂತಹ ನೂರು ವರ್ಷದ ಪರಮಾಯುಷ್ಯವು ಈ ದೇವೇಂದ್ರನಿಗೆ ಉಂಟು. ನಾನು ಸೋತರೆ, ಇಂತಹ ಹದಿನಾಲ್ಕು ದೇವೇಂದ್ರರು ಜನ್ಮಗಳೆತ್ತಿ ದೇವಲೋಕ ಆಳುವವರೆಗೂ ನಾನು ಈ ದೇವಲೋಕಕ್ಕೆ ಬರುವುದಿಲ್ಲ! ಇದೇ ನನ್ನ ಪ್ರತಿಜ್ಞೆ!'

'ಹೊಟ್ಟೆ ನೊಂದರೆ ಜುಟ್ಟನ್ನು ಕತ್ತರಿಸುವ, ಹಸು ಕರುವನ್ನು ಮೆಟ್ಟಿದರೆ ಗೂಳಿಯನ್ನು ಬಡಿಯುವ, ಸೂಳೆ ದೂರು ಕೊಟ್ಟರೆ ಊರಿನ ಹೆಬ್ಬಾಗಿಲನ್ನು ಮುರಿಯುವವನ ನಗೆಯ ಕತೆಯನ್ನು ಈ ಸಭೆಯಲ್ಲಿ ಇಂದು ಕಂಡಂತಾಯಿತು!'

'ವಿಶ್ವಾಮಿತ್ರರೆ, ಹರಿಶ್ಚಂದ್ರನು ಸತ್ಯಸಂಧನೆಂಬುದು ದೃಢವಾದರೆ ಹದಿನಾಲ್ಕು ದೇವೇಂದ್ರರು ಸತ್ತು ಹುಟ್ಟುವತನಕ ಸ್ವರ್ಗಕ್ಕೆ ಕಾಲಿಡೆನು ಎಂಬ ನಿಮ್ಮ ಪ್ರತಿಜ್ಞೆ ಒಂದಕ್ಕೊಂದು ಸಂಬಂಧವಿಲ್ಲದಂತಿದೆ!' ಎಂದು ನಾರದರು ನಕ್ಕು ನುಡಿದರು. ಅದನ್ನು ಕೇಳಿ ಕೌಶಿಕನ ಚಿತ್ತ ಚುರುಕಾದಂತಾಯಿತು. ಮತ್ತೆ ತನ್ನ ಪ್ರತಿಜ್ಞೆಯನ್ನು ಮುಂದುವರಿಸಿ ಹೀಗೆ ಹೇಳಿದನು.

'ಹರಿಶ್ಚಂದ್ರನು ಸುಳ್ಳನ್ನು ಹೇಳದಿದ್ದರೆ – ನನ್ನ ಭಕ್ತಿ, ಶಮೆ, ದಮೆ, ಯೋಗ, ಯಾಗ, ವಿರಕ್ತಿ, ಘೋರವ್ರತ, ತಪೋನಿಷ್ಠೆ, ವರಸತ್ಯ, ನಿತ್ಯನೇಮ, ಯುಕ್ತಿ, ಶೈವಾಗಮಾವೇಶ, ಲಿಂಗಾರ್ಚನಾಸಕ್ತಿಯಿಂದ ಬೆಳೆದ ಪುಣ್ಯದಲ್ಲಿ ಅರ್ಧವನ್ನು – ದೇವತೆಗಳ ಸಾಕ್ಷಿಯಲ್ಲಿ ಹರಿಶ್ಚಂದ್ರನಿಗೆ ಧಾರೆಯೆರೆದು ಕೊಡುತ್ತೇನೆ!'

ತಕ್ಷಣ ಉತ್ಸಾಹಿತನಾದ ವಸಿಷ್ಠನು, ವಿಶ್ವಾಮಿತ್ರನನ್ನು ಕೇಳಿದನು.

'ಎಂದು ಹರಿಶ್ಚಂದ್ರನನ್ನು ಪರೀಕ್ಷಿಸುವೆ?'

'ನನ್ನ ಮನಸ್ಸಿಗೆ ಬಂದ ದಿನ'

'ಎಷ್ಟು ದಿನಗಳವರೆಗೆ?'

'ಅವನು ಈ ಧರೆಯಲ್ಲಿ ಇರುವ ತನಕ!'

'ಯಾವ ಯಾವ ರೀತಿಯಲ್ಲಿ?'

'ಸಹಸ್ರ ವಿಧದಲ್ಲಿ!'

'ದಿಟವೆ?'

'ದಿಟ.'

'ಹಾಗಿದ್ದರೆ ತಡವೇಕೆ, ಪರೀಕ್ಷೆಗೆ ನಡೆ' ಎಂದು ವಸಿಷ್ಠನು ಒತ್ತಾಯಿಸಲು ವಿಶ್ವಾಮಿತ್ರನು,

'ವಸಿಷ್ಠ ಮುನಿಯೆ, ಏಕಿಷ್ಟು ಕೋಪಿಸಿಕೊಳ್ಳುವೆ? ಹರಿಶ್ಚಂದ್ರ ರಾಜನ ಮನೆಗೆ ನೀನು ಈಗಲೇ ಹೋಗು. ಕೌಶಿಕ ನಿನ್ನನ್ನು ನಾಶಪಡಿಸಲು ಹೀಗೀಗೆ ಕಾಡಲಿರುವನು, ನೀನು ಎಚ್ಚರದಿಂದಿರು ಎಂದು ನೆನಪು ಮಾಡು.'

'ಹಾಗೆ ನಾನು ಹೇಳುವವನೆ, ಹೇಳು?'

'ನನ್ನ ತೊಂದರೆ ಹಿಂಸೆಯನ್ನು ತಡೆಯಲಾಗದೆ ಹರಿಶ್ಚಂದ್ರನು ಹುಸಿ ನುಡಿದರೆ, ನೀನು ಮುನಿತನವನ್ನು ಕಳೆದುಕೊಳ್ಳಬೇಕಾಗುವುದು! ಹೋಗಿ ಹೇಳು!'

'ವಿಶ್ವಾಮಿತ್ರ ಮುನಿಪುಂಗವನೆ, ವರಹರಿಶ್ಚಂದ್ರನಿಗೆ ಸತ್ಯಗೆಡದಿರು ಎಂದು ಮೋಸದಿಂದ ಮೊದಲೆ ಹೇಳಲು ನಾನೇಕೆ ಹೋಗಲಿ? ಸೂರ್ಯನೆ ತೇಜಸ್ಸನ್ನು ಕಳೆದುಕೊಳ್ಳಬೇಡ! ಅಗ್ನಿಯೆ ತಣ್ಣಗಾಗಬೇಡ! ತಾವರೆಯ ವೈರಿ ಚಂದ್ರನೆ ತಂಪನ್ನು ಕಳೆದುಕೊಳ್ಳಬೇಡ! ಎಲೆಲೆ ಮಂದರ ಪರ್ವತವೆ ಚಲಿಸಬೇಡ! ಎಂದು ಬೋಧಿಸಬೇಕೆ? ಚಾಡಿ ಹೇಳಿ ನನ್ನ ಹಿರಿಯತನಕ್ಕೆ ಕಳಂಕ ತಂದುಕೊಳ್ಳುವೆನೆ?'

## ಸಿಡಿಲು ಹೊಡೆವಡೆ ಹಿಡಿದ ಕೊಡೆ ಕಾವುದೇ

'ಮುನಿಪನೆ, ಸಿಡಿಲು ಹೊಡೆದರೆ ಹಿಡಿದ ಕೊಡೆ ಕಾಪಾಡುವುದೇ? ಕೋಪಗೊಂಡು ಭೂಮಿ ಎಲ್ಲವನ್ನೂ ನುಂಗುವಾಗ ಮನೆ ಉಳಿಸುವುದೇ? ಮಹಾಸಮುದ್ರ ಉಕ್ಕಿ ಜಗತ್ತನ್ನು ಕಬಳಿಸುವಾಗ ಬಿದಿರು ಮೆಳೆಗಳು ರಕ್ಷಿಸುತ್ತವೆಯೆ?'

'ವಸಿಷ್ಠನೇ, ನಾನು ಕಡುಮುಳಿದ ಬಳಿಕ ನಿನ್ನ ಬಡ ಬೋಧೆ ಗೀದೆಗಳು ಅವನನ್ನು ರಕ್ಷಿಸಲಾರವು! ನೀನು ಹೇಳದೆ ಇದ್ದರೆ ಮದನಹರನಾಣೆ! ಹೋಗು, ಎಚ್ಚರಿಸು!'

'ಕುಲವನ್ನು ನಾಲಗೆ ಹೇಳಿತು ಎಂಬ ನಾಣ್ನುಡಿ ಇಂದು ದಿಟವಾಯಿತು! ಬ್ರಹ್ಮರ್ಷಿಯಾಗಿದ್ದರೆ ನಿನ್ನ ಒಳಗು ನಿರ್ಮಲವಾಗಿರುತ್ತಿತ್ತು! ನೀನು ರಾಜರ್ಷಿ. ಕೋಪಗೊಳ್ಳದೆ, ಗದರಿಸದೆ, ಹೀಯಾಳಿಸದೆ ಸಮಾಧಾನದಿಂದಿರಲು ನಿನಗೆ ಹೇಗೆ ಸಾಧ್ಯ?' ಎಂದು ವಸಿಷ್ಠ ಹೇಳಿದ ಮಾತು ಕೇಳಿ ಕುಪಿತನಾದ ಕೌಶಿಕನನ್ನು ಯಾವ ಕವಿ ತಾನೆ ಬಣ್ಣಿಸಲು ಸಾಧ್ಯ! ಅವನ ಪ್ರತಿನುಡಿ ಉರಿಯನ್ನು ಉಗುಳಲು, ಕಣ್ಣು ಕಿಡಿಗೆದರಿತು! ಮುಖ ಕೆಂಡದಂತೆ ಕೆಂಪಾಗಿ ಹಣೆ ಬೆವರಿತು! ಕೈನಡುಗಿ, ಹುಬ್ಬು ಕಂಪನಗೊಂಡಿತು! ಹೊಳೆಯುವ ತುಟಿಗಳು ನಡುಗಲು ಯೋಗದಂಡವು ಹೊಗೆಯನ್ನು ಕಾರಿತು! ಕಾಲುಗಳು ಒಲೆದಾಡಿ, ಧರಿಸಿದ್ದ ವಿಭೂತಿ ಮಸುಕಾಯಿತು! ಮೈಯ ರೋಮಗಳು ನಿಮಿರಿ, ಕಮಂಡಲದಲ್ಲಿನ ಜಲವು ತೆಕ್ಕ ತೆಕ್ಕನೆ ಕುದಿಯಿತು!

ಶಿವನ ಹಣೆಗಿಚ್ಚು ಮುನಿಯಾದಂತೆ ಕೌಶಿಕನು ಕೋಪಗೊಂಡು ವಸಿಷ್ಠನನ್ನುದ್ದೇಶಿಸಿ,

'ನೋಡು! ನೋಡು!! ನೀನು ಇಂದು ನನ್ನನ್ನು ರಾಜ ಋಷಿಯೆಂದು ಕೆಟ್ಟದಾಗಿ ಕರೆದಿರುವೆ. ಈ ಕಾರಣ ಹರಿಶ್ಚಂದ್ರನನ್ನು ಕಾಡಿ ಅಸತ್ಯನನ್ನಾಗಿ ಮಾಡುತ್ತೇನೆ! ಪ್ರತಿಜ್ಞೆಯನ್ನು ಮಾಡಿದ ನಿನ್ನನ್ನು ವ್ರತ ಭ್ರಷ್ಟನೆನಿಸಿ ಅಪಹಾಸ್ಯಕ್ಕೀಡು ಮಾಡುತ್ತೇನೆ!' ಎಂದು ಹೇಳುತ್ತ–ಸಿಡಿಲು ಆರ್ಭಟಿಸಿ ಗರ್ಜಿಸಿ ಮೇಘದಿಂದ ಹೊರ ಹೊಮ್ಮುವಂತೆ, ಆವೇಶಭರಿತನಾದ ಕೌಶಿಕನು ಇಂದ್ರನ ಓಲಗದಿಂದ ಹೊರಕ್ಕೆ ಹೋದನು. ತನ್ನ ಆಶ್ರಮವನ್ನು ಹೊಕ್ಕು ಕೋಪದಿಂದ ಶಬ್ದ ಬರುವಂತೆ ಹಲ್ಲನ್ನು ಕಡಿಯುತ್ತ ರಾಜ ಹರಿಶ್ಚಂದ್ರನನ್ನು ಕಾಡುವ ಉಪಾಯವನ್ನು ಚಿಂತಿಸಿದನು,

ಪರಮೇಶ್ವರ ಮೂರ್ತಿಯಂತಿದ್ದ ವಸಿಷ್ಠಮುನಿಯು ರಾಜಹರಿಶ್ಚಂದ್ರನಿಗೆ ಯಾವುದೇ ವಿಷಯವನ್ನು ತಿಳಿಸದೆ, ತನ್ನ ತಪೋವನದಲ್ಲಿ ಸುಖದಿಂದಿದ್ದನು.

ಈ ವಾದ ವಿವಾದಗಳ ಯಾವ ವಿಷಯವನ್ನೂ ತಿಳಿಯದ ಹರಿಶ್ಚಂದ್ರ ಭೂಭುಜನು ತನ್ನ ಪಾಡಿಗೆ ತಾನು ರಾಜ್ಯವನ್ನು ಪಾಲಿಸುತ್ತ ನೆಮ್ಮದಿಯಿಂದಿದ್ದನು.

# ಬಹು ಸುವರ್ಣಯಾಗ

'**ಕೋ**ಣಗಳೆರಡು ಹೋರಾಡುವಾಗ ಗಿಡಕ್ಕೆ ಮೃತ್ಯು' ಎಂಬ ಗಾದೆಯನ್ನು ನಿಜವಾಗಿಸುವಂತೆ ವಿಶ್ವಾಮಿತ್ರನು ಕಾರ್ಯಪ್ರವೃತ್ತನಾದನು. ವಸಿಷ್ಠ ಮುನಿಯೊಂದಿಗೆ ಮಾಡಿಕೊಂಡ ಪ್ರತಿಜ್ಞೆಯನ್ನು ಗೆಲ್ಲುವಬಗ್ಗೆ ಚಿಂತಿಸತೊಡಗಿದನು. ರಾಜ ಹರಿಶ್ಚಂದ್ರನ ಉನ್ನತಿಯು ನಾಶವಾಗುವುದನ್ನು ಕಾಣಬೇಕೆಂದು ತನ್ನ ಪವಾಡ ಕಲಾ ಪ್ರಾವೀಣ್ಯವನ್ನು ಒರೆಗೆ ಹಚ್ಚಲು ತೊಡಗಿದನು. ಏಕಾಂತದಲ್ಲಿ ಕುಳಿತು ರಹಸ್ಯ ಯೋಜನೆಯ ಚಿಂತೆಯ ಭ್ರಾಂತಿಯೋಗದಲ್ಲಿ ಮುಳುಗಿದನು! ಹರಿಶ್ಚಂದ್ರನು ಸುಳ್ಳು ಆಡುವಂತೆ ಮಾಡುವ ಬಗೆ ಹೇಗೆ ಎಂದು ಆಲೋಚಿಸಿದನು!

ಹಾಗೆ ಚಿಂತಿಸುವಾಗ ಒಂದು ಉಪಾಯವು ಹೊಳೆಯಿತು. ತಕ್ಷಣ ತೋಳುಗಳನ್ನು ತಟ್ಟಿಕೊಂಡು, ಸೆಡ್ಡು ಹೊಡೆಯುವ ಉತ್ಸಾಹದಲ್ಲಿ ಉಬ್ಬಿಹೋದನು!

ವಿಶ್ವಾಮಿತ್ರನು ತನ್ನ ರಹಸ್ಯ ವೈರವನ್ನು ತಿಳಿಯದ ಮುನಿಗಳನ್ನು ಕರೆದು 'ನೀವು ಈಗಲೇ ಹರಿಶ್ಚಂದ್ರ ಭೂವರನ ಬಳಿಗೆ ಹೋಗಿ ಅವನನ್ನು ಆರೈಕೆ ಮಾಡಿ. ಅವನು ಬಹು ಸುವರ್ಣಯಾಗವನ್ನು ಮಾಡುವಂತೆ ಬೋಧಿಸಿ. ಆ ಯಾಗವನ್ನು ಮಾಡುವ ರೀತಿಯನ್ನು ಮನದಟ್ಟುಮಾಡಿ. ಯಾಗ ಮಾಡಲು ಪ್ರೇರೇಪಿಸಿ' ಎಂದು ಹೇಳಿ ಕಳುಹಿಸಿದನು.

ಕೌಶಿಕ ಮುನಿಯ ಕುಟಿಲವನ್ನು ತಿಳಿಯದ ಅವರು ಹರಿಶ್ಚಂದ್ರ ರಾಜನಲ್ಲಿಗೆ ಹೋಗಿ ಅಕ್ಷತೆಯಿಂದ ಮಂಗಳಾಶೀರ್ವಾದವನ್ನು ಮಾಡಿದರು. ಸಂತೋಷ ಚಿತ್ತನಾದ ರಾಜನು ಅವರ ಯೋಗಕ್ಷೇಮವನ್ನು ವಿಚಾರಿಸಿ ಅನಂತರ ಕೇಳಿದನು,

'ಮುನಿವರ್ಯರೆ, ತಾವು ಬಂದ ಕಾರ್ಯ ನಿಮಿತ್ತವನ್ನು ತಿಳಿಸಿರಿ.'

'ಮಹಾರಾಜರೆ, ಸಕಲವೇದ ಪುರಾಣಾಗಮಗಳ ರಾಶಿಗಳಲ್ಲಿ ಒಂದು ಉತ್ತಮವಾದ ಧರ್ಮಕಾರ್ಯವನ್ನು ತಿಳಿದೆವು. ಅದನ್ನು ತಮಗೆ ತಿಳಿಸಲು ಬಂದೆವು.'

'ಅದಾವುದು ಎಂದು ತಿಳಿಸಿ.'

'ತಾವು ಮಾಡುವ ವಿಶ್ವಾಸವನ್ನು ವ್ಯಕ್ತಪಡಿಸಿದರೆ ಹೇಳುವೆವು. ಇಲ್ಲದಿದ್ದರೆ ಹೇಳಿ ಫಲವೇನು?'

'ಗುರು ವಸಿಷ್ಠ ಮುನಿಗಳ ಪಾದಕಮಲದಾಣೆಯಾಗಿ ಸಂತೋಷದಿಂದ ಮಾಡುತ್ತೇನೆ. ಸಂಕೋಚವಿಲ್ಲದೆ ಹೇಳಿ.'

'ಭೂಪತಿಯೆ, ಬಹು ಸುವರ್ಣಯಾಗವನ್ನು ಮಾಡು. ಅದು ಕೋಟ್ಯಾನು ಕೋಟಿಯಾಗಗಳಲ್ಲಿ ಅಧಿಕ ಫಲ ನೀಡುವುದು. ಅದು ನಿನಗಲ್ಲದೆ ಇನ್ನುಳಿದವರಿಗೆ ಅಸಾಧ್ಯವಾದುದು!'

'ಋಷಿವರ್ಯರೆ, ಆ ಯಾಗದ ಕ್ರಮ ನಿಯಮಗಳನ್ನು ತಿಳಿಸಿ' ಎಂದು ಹರಿಶ್ಚಂದ್ರ ಮಹಾರಾಜನು ಬಹು ಸುವರ್ಣಯಾಗ ಮಾಡಲು ಉತ್ಸುಕನಾಗಿ ವಿಚಾರಿಸಲು; ಆಗ ಮುನಿಗಳು,

'ಬಹು ಸುವರ್ಣಯಾಗದಲ್ಲಿ ನೆರೆದ ಮುನಿಗಳಿಗೆ – ಅವರು ಯಾವುದೇ ವಸ್ತುವನ್ನು ಬೇಡಿದರೂ ಅದನ್ನು ದಾನವಾಗಿ ನೀಡಬೇಕು. ಆಗ ನಿನಗೆ ಯಾವುದೇ ದೋಷ ಉಂಟಾಗುವುದಿಲ್ಲ. ಸ್ವಲ್ಪ ಹಿಂಜರಿದರೂ ದೋಷ ಶತಸಿದ್ಧ' ಎಂದು ತಿಳಿಸಿದರು.

ಆ ಪವಿತ್ರ ಮುನಿಗಳ ಹಿತೋಪದೇಶಕ್ಕೆ ಹರಿಶ್ಚಂದ್ರ ಭೂವರನು ಒಪ್ಪಿ, ಬಹು ಸುವರ್ಣಯಾಗ ಮಾಡಲು ನಿರ್ಧರಿಸಿದನು. ಸಕಲ ಮುನಿವರ್ಗವನ್ನು ಬರಮಾಡಿ ಕೊಂಡನು. ಯಾಗದಲ್ಲಿ ಯಾವ ಮುನಿಯು ಯಾವುದನ್ನು ಅಪೇಕ್ಷಿಸಿದರೂ, ಪ್ರೀತಿ ಸಂತೋಷದಿಂದ ಕೊಟ್ಟು ಉಪಚರಿಸಿದನು. ವಸಿಷ್ಠಮುನಿಗಳು ಬಂದು ಹೋದ ಹೊತ್ತನ್ನು ಗಮನಿಸಿ ಅನಂತರ ಸತ್ಪುರುಷರೆಂಬ ಜಿಂಕೆಗಳನ್ನು ಬೇಟೆಯಾಡುವ ಕಪಟ ಪಟು ಕೌಶಿಕನು ಯಾಗಮಂಟಪಕ್ಕೆ ಬಂದನು.

ವಿಶ್ವಾಮಿತ್ರ ಮುನಿಯನ್ನು ಕಂಡು ಹರಿಶ್ಚಂದ್ರನು ಸಂಭ್ರಮದಿಂದ ಸ್ವಾಗತಿಸಿದನು. ಅವರ ಚರಣಕಮಲಗಳನ್ನು ತೊಳೆದು ಕೇಳಿಕೊಂಡನು,

'ಮಹಾಋಷಿಗಳೆ, ತಮ್ಮ ಇಷ್ಟಾರ್ಥವೇನೆಂದು ಅಪ್ಪಣೆಯಾಗಲಿ.'

'ರಾಜನೆ, ಹಿರಿದಾದ ಆನೆಯಮೇಲೆ ನಿಂತು ಒಂದು ಕವಡೆಯನ್ನು ಮಿಡಿದರೆ, ಅದು ಎಷ್ಟು ಎತ್ತರಕ್ಕೆ ಹೋಗುವುದೊ ಅಷ್ಟೆತ್ತರದ ಸುವರ್ಣ ರಾಶಿಯನ್ನು ಕೊಡು.'

'ಪೂಜ್ಯರೆ, ಇದು ತಮ್ಮ ಕೃಪೆ ಸ್ವೀಕರಿಸಿ' ಎಂದು ಹರಿಶ್ಚಂದ್ರನು ಅಷ್ಟು ಸುವರ್ಣವನ್ನು ಕೊಟ್ಟು, 'ತಾವು ತೆಗೆದುಕೊಂಡು ಹೋಗಬಹುದು' ಎಂದನು.

ವಿಶ್ವಾಮಿತ್ರನು ಆ ಧನವನ್ನು ಒಯ್ಯದೆ, 'ಈಗ ಬೇಡ. ನಿನ್ನ ಮೇಲಿರಲಿ. ಬೇಕಾದಾಗ ತರಿಸಿಕೊಳ್ಳುತ್ತೇನೆ' ಎಂದು ಹೇಳಿ ರಾಜನಿಂದ ಪಡೆದ ಹೊನ್ನ ರಾಶಿಯನ್ನು ರಾಜನ ಭಂಡಾರದೊಳಗಿರಿಸಿ ತನ್ನ ಆಶ್ರಮಕ್ಕೆ ತೆರಳಿದನು.

**ಚಂಡಕಿರನರುಣ ಕಿರಣವು ಹೋಗುವ ಠಾವೆಲ್ಲವಂ ತೀವಿತವನ ಸತ್ಯ**

ಸೂರ್ಯಕಿರಣವು ಪ್ರವೇಶಿಸುವ ಠಾವಿನಲ್ಲೆಲ್ಲ ಹರಿಶ್ಚಂದ್ರ ನೃಪನ ಸತ್ಯಪ್ರಭೆ ತುಂಬಿ ಹರಿಯಿತು!

ಹರಿಶ್ಚಂದ್ರನನ್ನು ಹುಸಿಕನನ್ನಾಗಿಸಿ; ದೇವೇಂದ್ರನ ಎದುರು, ಪಂಡಿತರ ಮುಂದೆ ವಸಿಷ್ಠರ ತೇಜೋವಧೆ ಮಾಡುವ ಕೌಶಿಕ ಮುನಿಯ ಪ್ರಯತ್ನ ವಿಫಲವಾಗಲು ಕೋಪ ಹೆಚ್ಚಿತು! ಈಗ ಮತ್ತೆ ಯಾವ ಬಗೆಯಲ್ಲಿ ಭೂಪತಿಯನ್ನು ಸುಳ್ಳು ಹೇಳುವವನನ್ನಾಗಿಸಬಹುದು ಎಂಬ ಚಿಂತೆ ಆವರಿಸಿತು.

ಒಂದೆರಡು ಹಳ್ಳಿ ನಗರಗಳಲ್ಲಿ ಮಾತ್ರವಲ್ಲದೆ ಸಮುದ್ರ ಪರ್ಯಂತರವಾದ ಭೂಮಂಡಲದ ಎಲ್ಲ ಕಡೆಯೂ ಹರಿಶ್ಚಂದ್ರರಾಜನನ್ನು ಹಾಡಿ ಹೊಗಳುತ್ತಿದ್ದರು! ಆ

ರಾಜ್ಯದ ಹದಿನೆಂಟು ಬಗೆಯ ಪ್ರಜೆಗಳಲ್ಲಿ ಬಡತನ, ಕುಂದುಕೊರತೆ, ಯಾವುದೇ ಕಟ್ಟುಬಂಧನ, ಅಪಕೀರ್ತಿಗಳಿರಲಿಲ್ಲ. ಅವರು ಸುಖಸಮೃದ್ಧಿಯಿಂದಿದ್ದರು. ಸತ್ಯಸಂಧ ಧರ್ಮಾತ್ಮನೆಂಬ ಬಿರುದಿನ ಚಿನ್ನದಂದುಗೆಯನ್ನು ಆ ರಾಜ ಹೊಂದಿದ್ದನು! ಅದನ್ನು ಕಂಡು ವಿಶ್ವಾಮಿತ್ರನ ಮನಸ್ಸು ತಳಮಳಿಸಿ ಮತ್ತೆ ದುರ್ಯುಕ್ತಿಯೆಡೆಗೆ ಸಾಗಿತು!

ಕರ್ಪೂರವನ್ನು ಸುಟ್ಟು ಮೈ ಕಾಯಿಸಿಕೊಂಡಂತೆ, ಮಣಿದರ್ಪಣವನ್ನು ಕುಟ್ಟಿ ಹಲಗೆಯನ್ನು ಮಾಡಿದಂತೆ, ಪ್ರೀತಿ ಮಮತೆಯ ತಾಯಿಯನ್ನು ಮಾರಿ ದಾಸಿಯನ್ನು ಕೊಂಡು ಕೊಂಡಂತೆ, ಕೀಲಿ ಕೈಗಾಗಿ ದೇವಾಲಯವನ್ನು ಕೆಡಿಸುವ ದರ್ಪಿಷ್ಠನಂತೆ ತನ್ನ ಛಲದ ಸಾಧನೆಗಾಗಿ – ಹರಿಶ್ಚಂದ್ರರಾಯನ ಕೀರ್ತಿಗೆ ಕಳಂಕ ತರುವುದನ್ನು ಕುರಿತು ವಿಶ್ವಾಮಿತ್ರ ಯೋಚಿಸಿದನು!

ವನ್ಯ ಮೃಗಗಳನ್ನು ಹುಟ್ಟಿಸಿ ಅವನ ರಾಜ್ಯದ ಬೆಳೆಯನ್ನು ನಾಶಪಡಿಸುವಂತೆ ಮಾಡುವೆನು. ಅವುಗಳ ಹಾವಳಿಯನ್ನು ಸಹಿಸಲಾರದೆ ಬೆಂಡಾದ ಜನ ಬವಣೆಗೊಂಡು ಬಾಯ್ಬಿಟ್ಟು ಅವನ ಬಳಿ ದೂರು ಹೇಳಿಕೊಳ್ಳುವರು. ಮೃಗಗಳನ್ನು ಬೇಟೆಯಾಡಲು ಹರಿಶ್ಚಂದ್ರನು ಅರಣ್ಯಕ್ಕೆ ಬರುವನು. ಆಗ ಅವನಿಗೆ ಆಕರ್ಷಣೆಯನ್ನು ಒಡ್ಡಿ ನನ್ನ ಆಶ್ರಮವನ್ನು ಪ್ರವೇಶಿಸುವಂತೆ ಮಾಡುವೆನು. ಅವನ ಸತ್ಯಗಿತ್ಯದ ದೃಢತೆಯನ್ನು ನೋಡುವೆನು ಎಂದು ಸಂಚು ಹೂಡಿದನು.

ತನ್ನ ಕುಶಲ ಬುದ್ಧಿಗೆ ತಾನೇ ಮೆಚ್ಚಿಕೊಂಡನು! ತನಗೆ ತಾನೆ ದೃಷ್ಟಿದೋಷ ಪರಿಹಾರವಾಗಿ ಉಃಫೆಂದು ಊದಿಕೊಂಡನು! ಕಣ್ಣು ಮುಚ್ಚಿಕೊಂಡು ತನ್ನ ಮನಸ್ಸಿನಲ್ಲಿ ಉತ್ಪತ್ತಿ ಮಂತ್ರವನ್ನು ಜಪಿಸಿದನು! ಮಂತ್ರಿಸಿದ ಜಲವನ್ನು ಸಂತೋಷದಿಂದ ದಿಕ್ಕು ದಿಕ್ಕಿಗೆ ಚಿಮುಕಿಸಿದನು! ನೋಡು ನೋಡುತ್ತಿದ್ದಂತೆ ಭೂಮಿಯಿಂದ ಹೊರಹೊಮ್ಮಿ ಬಂದ ನಾನಾ ಪಕ್ಷಿ ಮೃಗಕುಲಕ್ಕೆ ಬೆರಳು ತೋರಿ ಮೆಚ್ಚಿದನು! ಹರಿಶ್ಚಂದ್ರನ ಪ್ರಜೆಗಳನ್ನು ಗೋಳಾಡಿಸುವಂತೆ ಅವುಗಳಿಗೆ ಕೈ ಬೀಸಿ ಆಜ್ಞೆ ಮಾಡಿದನು!

ಧರಣೀಶ ಹರಿಶ್ಚಂದ್ರನನ್ನು ಹುಸಿಕನೆನಿಸುವೆ. ವಸಿಷ್ಠಮುನಿವರನನ್ನು ವ್ರತ ಭ್ರಷ್ಟನಾಗಿಸುವೆ ಎಂಬ ನನ್ನ ಪ್ರತಿಜ್ಞೆಗೆ ಬಲ ಬಂದಂತಾಯಿತು! ನನ್ನ ಉಪಾಯವು ವೃದ್ಧಿಯಾಗಿ, ಸಮೃದ್ಧಿಯಾಗಿ ಮೊಳೆಯಿತು! ಎಂದು ಕೌಶಿಕನು ಉಬ್ಬಿಹೋಗಿ ತಪೋವನದಲ್ಲಿ ಉತ್ಸಾಹದಿಂದಿದ್ದನು.

# ನಂದನವನದಲ್ಲಿ ಹರಿಶ್ಚಂದ್ರ ಭೂಪಾಲ

**ಮಾ**ಗಿಯಕಾಲ ಕಳೆದು ವಸಂತಋತು ಅಡಿಯಿಟ್ಟಿತು. ಮಾವು ಚಿಗುರಿತು. ತಳಿರು ಹೊಸ ಉಡುಗೆ ತೊಟ್ಟಿತು. ಲತೆಗಳು ಚಿಗುರಿದುವು. ಕುಸುಮವು ಪರಾಗವನ್ನು ಹರಡಲು ಅದರ ಸುತ್ತಲೂ ತುಂಬಿಗಳು ಹರಿದಾಡಿದವು. ತಂಗಾಳಿ ತಂಪುಬೀರಿ ಶಶಿಗೆ ಕಳೆಯೇರಿತು. ಕೋಕಿಲದ ರವವು ಮೇಲಾಯಿತು. ಕಾಮನ ಶರಗಳು ನಾಟಲು ವಿರಹಿಗಳು ಬಾಯ್ಬಿಟ್ಟರು. ವಸಂತವು ಮುದದಿಂದ ಬಂದಿತು! ಸೊಬಗಿನ ವಸಂತವನ್ನು ಕಂಡು ಹರಿಶ್ಚಂದ್ರ ರಾಜನ ವನಪಾಲಕನು ಹರ್ಷಗೊಂಡನು. ಉತ್ಸಾಹದಿಂದ ಹೋಗಿ ರಾಜನನ್ನು ಕಂಡನು. ನಳನಳಿಸುವ ಅಶೋಕ ವೃಕ್ಷದ ತಳಿರ ತೊಂಗಲುಗಳನ್ನು, ನವಕುಸುಮಗಳ ಗುಚ್ಛವನ್ನು, ಹಣ್ಣುಗಳ ಗೊಂಚಲನ್ನು ನೀಡಿದನು. ತೊಳ ತೊಳಗುವ ರಾಜನ ಅಡಿದಾವರೆಯಲ್ಲಿ ಗೌರವಾದರಗಳಿಂದ ತನ್ನ ತಲೆಯಿಟ್ಟು ವಂದಿಸಿದನು. ಮೃದು ವಚನದಿಂದ ನಿವೇದಿಸಿಕೊಂಡನು:

'ಮಹಾರಾಜರೆ, ವಸಂತದ ಸೊಬಗೆಂದರೆ ಎಳಲತೆಯ ಲಾವಣ್ಯ ಲಹರಿ, ಮಾವುಗಳ ಮಂಗಳದ ನೆಲೆ; ಕೋಗಿಲೆಯ ಕೊರಳ ಪುಣ್ಯ, ತುಂಬಿಗಳು ಅನುಭವಿಸುವ ನಾಸಿಕದ ನಲಿವು. ಅದು ನವಿಲ ನಾಟ್ಯರಂಗ, ಜನದ ಸುಗ್ಗಿ, ಗಿಳಿವಿಂಡುಗಳ ಸಾಮ್ರಾಜ್ಯ. ಅದು ತಂಪಾದ ಕಿರಣಗಳಿಂದ ಕೂಡಿರುವ ಚಂದ್ರನ ಬೆಳದಿಂಗಳ ಬೆಂಬಲವನ್ನು ಹೊಂದಿ, ಮನ್ಮಥನ ಭುಜಬಲದ ವೀರ ಸಿರಿಯಾಗಿದೆ. ಅದನ್ನು ಕಾಣಲು ಬನ್ನಿ.

'ಇಂತಹ ಮನೋಹರ ಋತು ಸಮಯದಲ್ಲಿ – ಸೂರ್ಯನಬರವನ್ನು ಬಯಸುವ ತಾವರೆಯ ಬನದಂತೆ, ನೀವು ಬರುವುದನ್ನು ನಂದನವನ ಬಯಸುತ್ತದೆ!

'ಸಕಲ ಪರಿವಾರದೊಡನೆ ಒಂದು ತಿಂಗಳು ಪೂರ್ತಿ ಅಲ್ಲಿದ್ದು ವಸಂತನ ಸುಖಸಾಮ್ರಾಜ್ಯವನ್ನು ಅನುಭವಿಸಿ. ನನ್ನ ಆಹ್ವಾನವನ್ನು ಮನ್ನಿಸಿ ಪ್ರಭು.'

ವನಪಾಲಕನ ಆತ್ಮೀಯ ಆಹ್ವಾನಕ್ಕೆ ಮನವೊಲಿದ ರಾಜ ಹರಿಶ್ಚಂದ್ರನು ನಗುಮುಖದಿಂದ ಹೇಳಿದನು,

'ವನಪಾಲಕರೆ, ಬರುತ್ತೇನೆ.'

'ನಮ್ಮ ಪುಣ್ಯ ನನ್ನೊಡೆಯ' ಎಂದು ಹರ್ಷದ ಕಣ್ಣೀರಿನಲ್ಲಿ ವನಪಾಲಕ ಸುಖಿಸಿದನು.

ಮಹಾರಾಜರು ತನ್ನ ಪಟ್ಟದರಸಿ ಚಂದ್ರಮತಿ, ಮಗ ಲೋಹಿತಾಶ್ವರನ್ನು ಕರೆದುಕೊಂಡು, ಮಂತ್ರಿ ಮತ್ತು ಸಕಲ ಪರಿವಾರ ಸಹಿತ ನಂದನವನಕ್ಕೆ ಹೊರಟನು.

ಅರಸನು ಹೊರಟ ಸಂಭ್ರಮಕ್ಕೆ ಭೇರಿ, ತಮಟೆ, ಸಣ್ಣ ನಗಾರಿಗಳು ಮೊರೆದವು. ಹೆಗ್ಗಾಳೆಗಳು, ಚಿನ್ನತಿತ್ತಿರಿ ಮೊಳಗಿದವು. ಜಯ ಘಂಟೆಗಳು ಉಲಿದವು. ಅವನ ಮೈಗಾವಲಾಗಿ ಕತ್ತಿ, ಗುರಾಣಿ, ಬಿಲ್ಲುಧಾರಿಗಳಾದ ಲಕ್ಷಾಂತರ ಸೈನಿಕರು ಇಕ್ಕೆಲದಲ್ಲಿ ನಡೆದರು. ಹೋಗುವಾಗ ನಿಂತರೆ ನಿಲ್ಲುವ, ಕುಳಿತರೆ ಕುಳಿತುಕೊಳ್ಳುವ ಮಹಾರಾವುತರು; ಜಿಂಕೆಯನ್ನು ನಾಚಿಸಿ ಗಾಳಿಗಿಂತಲೂ ವೇಗವಾಗಿ ಓಡುವ ಕುದುರೆಗಳು; ಮನೋವೇಗದಲ್ಲಿ ಓಡುವ ರಥಗಳು; ಗಂಭೀರ ನಡೆಯ ಗಜಗಳೊಡನೆ ರಾಜನು ಉದ್ಯಾನವನಕ್ಕೆ ಬಂದನು.

**ಕಂಗಳ ಬರಂ ಹರಿದುಹೋಯ್ತು ನಾರಿಯರ ಲಸಿತಾಂಗಮಂ ಕಂಡು.**

ರಾಣಿ ಚಂದ್ರಮತಿಯ ದಂಡಿಗೆಯ ಜೊತೆಗೆ ಸಹಸ್ರಾರು ಅಂದಣಗಳಲ್ಲಿ ಆಕೆಯ ಸಖಿಯರು, ದಾಸಿಯರು ಹೊರಟರು. ಆ ಪರಿವಾರದ ಸರೋಜಮುಖಿಯರು– ಕಾಡಿನಲ್ಲಿ ದಾರಿ ತಪ್ಪಿಸುವ ಕಾಮನ ಬಾಣವೊ, ಚಂದ್ರನ ಮನೆಗೆ ಒಲಿದು ದಾಳಿಯಿಡುವ ಸೈನ್ಯವೊ, ವರತಪೋಧನರ ನಿಷ್ಕಾಮನಿಧಿಯನ್ನು ಕಳವು ಮಾಡುವ ಚೋರರೊ ಎಂಬಂತಿದ್ದರು. ಆ ಲಲನೆಯರ ಹೊಳೆ ಹೊಳೆವ ಶರೀರವನ್ನು ಕಂಡು ಜನರ ಕಣ್ಣಿನ ಬರ ದೂರವಾಯಿತು. ಅವರು ತೊಡೆದುಕೊಂಡಿದ್ದ ಸುಗಂಧ ದ್ರವ್ಯಗಳ ಪರಿಮಳವನ್ನು ಆಘ್ರಾಣಿಸಿ ನಾಸಿಕಗಳು ತೃಪ್ತವಾದವು. ಆ ಲತಾಂಗಿಯರೊಡನೆ ಮಾತನಾಡುವ ನಾಲಿಗೆ ಸುಖಿಯಾಯಿತು. ಅವರು ಒಲಿದಾಡಿ ಹಾಡುವ ದನಿ ಕೇಳಿ ಕಿವಿಗಳ ಬಯಕೆ ಪೂರೈಸಿತು. ಅಂತಹ ವಿಲಾಸ ಸಖಿಯರೊಡನೆ ಮಂಗಳೋತ್ಸಾಹದಿಂದ ರಾಣಿ ನಂದನವನವನ್ನು ಪ್ರವೇಶಿಸಿದಳು.

ಆ ಉಪವನಕ್ಕೆ ಪರಿಮಳದ ಮುಳ್ಳುಬೇಲಿಯೊ ಎಂಬಂತೆ ಕೇದಗೆಗಳಿದ್ದವು. ಅವು ವಿರಹಿಗಳ ಚಿತ್ತವನ್ನು ಸೀಳುವ ಕಾಮನ ಕೈಯ ಗರಗಸದ ಮುಳ್ಳುಗಳೊ, ಮನ್ಮಥನು ಬಿಟ್ಟ ಬಾಣಗಳು ಮುನಿಗಳ ಕಠಿಣ ಮನಸ್ಸನ್ನು ಭೇದಿಸಿ ಮುರಿದು ಬಿದ್ದ ಮುಕ್ಕುಗಳೊ ಎಂಬಂತಿದ್ದವು!

ಆ ಉಪವನದಲ್ಲಿ ಎತ್ತರವಾಗಿ ನಿಂತು ತಲೆದೂಗಿ ಸ್ವಾಗತಿಸುವ ತೆಂಗಿನ ಮರದ ಚೆಂದೆಂಗುಗಳು – ನಿಮ್ಮಿಂದ ಪಡೆದ ಉಪಕಾರವನ್ನು ಹಿಂದಿರುಗಿಸುವೆನು ಎಂಬ ರೀತಿಯಲ್ಲಿ ಭೂತಾಯಿಯು ಕೈ ನೀಡಿ ಮೇಘಗಳಿಗೆ ಕೊಡುವ ಅಮೃತ ಕಲಶಗಳಂತಿದ್ದವು! ಅವು ಗಗನಾಂಗಣದಲ್ಲಿ ಸಂಚರಿಸುವ ವಿದ್ಯಾಧರರಿಗೆ ವಸಂತನು

ಏರ್ಪಡಿಸಿದ ಅರವಟ್ಟಿಗೆಯಂತಿದ್ದವು! ಕ್ಷೀರಸಾಗರವನ್ನು ಬಿಡದೆ ಕಡೆಯುವಾಗ ಹುಟ್ಟಿದ ಪದಾರ್ಥಗಳನ್ನು ದೇವತೆಗಳು ಕೊಂಡೊಯ್ಯುತ್ತಿರುವಾಗ - ಭೂಲತಾಂಗಿಯು ತೆಗೆದಿರಿಸಿಕೊಂಡ ರತ್ನರಸವೊ ಎಂಬಂತೆ ಹೊಳೆಯುತ್ತಿದ್ದವು!

ಆ ವನದಲ್ಲಿ ಜನರ ಪಂಚೇಂದ್ರಿಯಗಳ ಸವಿಯನ್ನು ಹೆಚ್ಚಿಸುವ ಮಾವಿನ ಜೊತೆಗೆ, ಕಡು ಚೆಲುವೆಯರು ಬೆಳಸಿಹಬ್ಬಿಸಿದ ಎಳಲತೆಗಳಿದ್ದವು! ಅಲ್ಲಿ ಕಾಮನ ನುಡಿಮುತ್ತುಗಳು ಹರಸಿದ ಸೇಸೆ ಎಂಬಂತಿರುವ ಮಲ್ಲಿಗೆ ಮೊಗ್ಗುಗಳು, ಅನುರಾಗಿಗಳು ಒಲಿದು ಹಾಕಿದ ದಾಳಿಂಬೆ, ವಸುಮತಿಯೆಂಬ ಕಾಮಿನಿ ಬೆಳೆಸಿದ ಸಂಪಗೆಯು ಸೊಗಸುಗೊಂಡು ಕಂಪು ಸೂಸುತ್ತಿದ್ದವು.

**ಹೃದಯದ ಕಳಂಕಿಲ್ಲದೋರಂತೆ ನಾರನುಟ್ಟ-ಕದಳಿಗಳು**

ಆ ಬನದಲ್ಲಿಯ ಬಾಳೆಮರಗಳು ಮುನಿಕುಲಕ್ಕೆ ಈ ರೀತಿ ಬುದ್ಧಿ ಹೇಳುತ್ತಿವೆಯೋ ಎಂಬಂತಿದ್ದವು :

ಮುನಿಗಳೆ ನಮ್ಮನ್ನು ನೋಡಿ. ನಾವು ನಮ್ಮ ಹೃದಯದಲ್ಲಿ ಕಳಂಕವಿಲ್ಲದೆ ನಾರನ್ನುಟ್ಟಿದ್ದೇವೆ! ನೀರನ್ನು ಕುಡಿದು ಮಳೆಗಾಳಿ ಬಿಸಿಲಿಗೆ ಹೆದರದೆ ವನದಲ್ಲಿ ಒಂದೆಡೆಯಲ್ಲಿದ್ದೇವೆ! ಅಹಂನ ಕೊಂಬೆಗಳಿಲ್ಲದೆ, ನೆಲಕ್ಕೆ ಹೊರೆಯಾಗದೆ ಬದುಕಿ ತಲೆಬಾಗಿ ಬೆಳೆಯುತ್ತಿದ್ದೇವೆ! ನಮ್ಮಲ್ಲಿ ಹುಟ್ಟಿದ ರಸಫಲವನ್ನು ಜನರಿಗೆ ನೀಡುತ್ತಿದ್ದೇವೆ.

**ಅಬಲೆಯರ ತೊಡಿಗೆವೆಳಗು ಹೊಂಬಿಸಿಲಂತಿರಲ್ ಕಂಡು ಕಮಲವರಳುವುವು**

ಆ ನಂದನವನದಲ್ಲಿ ಮರುಗ, ಸುರಗಿ, ಜಾಜಿ, ಮುಡಿವಾಳ, ಮಲ್ಲಿಗೆಗಳು ಕಂಪು ಬೀರಿದ್ದವು. ಗೋರಂಟಿ, ದಾಸವಾಳ, ಬನ್ನಾಳಿ ಹೂಗಳು ಶೋಭಿಸಿದ್ದವು. ಅಲ್ಲಿ ಹೊಳೆಯುವ ಕೊನರು, ಕೆಂದಳಿರು, ಚಿಗುರು, ಹಸುರೆಲೆ, ಮೊಗ್ಗು, ನನೆಮೊಗ್ಗು, ಹೂ, ಮಿಡಿಗಾಯಿ, ದೋರೆಹಣ್ಣು; ಹದವಾದ ಬಲಿತಕಾಯಿಗಳಿಂದ ಕೂಡಿದ ಮಾವು, ಜಂಬುನೇರಳೆ, ನಿಂಬೆ, ಕದಳಿ, ಗೇರು, ಹೇರಳೆ ಮರಗಳಿದ್ದವು. ಆ ವಿಶಾಲ ಮರಗಳ ದಟ್ಟಣೆಯಿಂದ ಸೂರ್ಯರಶ್ಮಿ, ಶಶಿಕಿರಣಗಳು ಆ ವನವನ್ನು ಪ್ರವೇಶಿಸುತ್ತಿರಲಿಲ್ಲ! ಅಲ್ಲಿಯ ಕೋಮಲ ಸ್ತ್ರೀಯರು ತೊಟ್ಟಿದ್ದ ಬಂಗಾರದ ಒಡವೆಗಳ ಹೊಂಬೆಳಗಿಗೆ ಕಮಲಗಳು ಅರಳುತ್ತಿದ್ದವು! ಅವರ ನಸುನಗೆಯ ಬೆಳದಿಂಗಳಿಗೆ ನೈದಿಲೆಗಳು ಅರಳುತ್ತಿದ್ದವು!

ಅಲ್ಲಿ ಪ್ರಕೃತಿಯೇ ಆನಂದಗೊಂಡಂತೆ ನವಿಲುಗಳು ನರ್ತಿಸುತ್ತಿದ್ದವು. ಆ ನರ್ತನಕ್ಕೆ ಗಿಳಿಗಳ ಓದು ಬಿರುದಾವಳಿಯ ಹೊಗಳಿಕೆ! ಕೋಕಿಲರವ ಕಹಳೆ! ಹಲಸು ಮದ್ದಳೆ! ಮೊರೆವ ದುಂಬಿಗಳು ವಂದಿಮಾಗದರು! ನೆಲಕ್ಕೆ ಬೀಸುವ ಅಶೋಕೆಯ ಚಿಗುರು ತೆರೆ! ಕುಸುಮಲತೆಗಳು ಬೆಳು ಮುಸುಕು! ಸತಿಯರು ನಡೆದಾಡುವ ಎಲೆಯ

ಮರ್ಮರ ಕಂಸಾಳೆ! ಮರದ ಮೆಚ್ಚಿಗೆಯೆ ತಲೆದೂಗು ಆಗಿ, ಮಾಗಿದ ಹಣ್ಣೆಲೆಯ ಮೌನವೇ ರಸಾನಂದದ ತನ್ಮಯತೆಯಾಗಿತ್ತು!

ಮನ್ಮಥನೇ ನೃಪರೂಪ ತಳೆದಂತಿರುವ ಹರಿಶ್ಚಂದ್ರನನ್ನು ವನದೇವತೆಗಳು ಉಚಿತ ಉಪಚಾರದಿಂದ ಸ್ವಾಗತಿಸಿದರು. ಹೊಳೆವ ಲತೆಗಳು ಸ್ತ್ರೀಯರಂತೆ ಕುಸುಮ ಸೀರೆಯುಟ್ಟು ಸುಖಾಗಮನ ಕೋರಿದರೆ, ಹಣ್ಣುಗಳೇ ಕಲಶಗಳಾಗಿ, ಎಳ ಚಿಗುರು ಕನ್ನಡಿಯಾಗಿತ್ತು! ಅರಗಿಳಿಗಳ ಅಬ್ಬರ ಡಿಂಡಿಮವಾಗಿ, ಕೋಗಿಲೆಗಳ ಧ್ವನಿ ಕಹಳೆಯಂತಿತ್ತು! ದುಂಬಿಗಳ ಝೇಂಕಾರ ಸ್ವಾಗತ ಗೀತವಾಗಿತ್ತು!

**ಸೌರಭ್ಯರಸದ ಕುಟುಕಿತ್ತು ಸಾಗಿಸುವ ಬಾಣಂತಿ ದುಂಬಿ**

ಆ ಸುಖ ಸಂಭ್ರಮದಲ್ಲಿ ರಾಜನು – ತಳದಲ್ಲಿ ಪ್ರೀತಿಯಿಂದ ಸುರಿದ ಕಿರು ಮುತ್ತುಗಳಂತಹ ಮಳಲುಗಳಿದ್ದ ನಿರ್ಮಲ ಜಲದ ಕೊಳದ ಬಳಿಗೆ ಬಂದನು. ಆ ಕೊಳದಲ್ಲಿ ಶಕ್ತಿಗುಂದಿ ಕುಗ್ಗಿದ ನೇಯ್ದಿಲವನ್ನು ಕಂಡು ನಗುವಂತೆ ಅರಳಿದ ಕಮಲ ಪುಷ್ಪಗಳಿದ್ದವು. ಆ ಪುಷ್ಪಗಳ ಕಿರು ಎಸಳ ಇಕ್ಕಟ್ಟಾದ ಎಡೆಯನ್ನು ಬಗಿದು ಪರಾಗ ತಂತುವಿನ ಹೊದರಿನಲ್ಲಿ ನುಸುಳಿ; ಪರಾಗವನ್ನು ಕಾಂತಿಗೊಳಿಸುವ ರಮ್ಯ ಹುಡಿಯಲ್ಲಿ ಹೊರಳಿ; ಮಕರಂದದ ಮಂದವಾದ ಕೆಸರೊಳಗೆ ಜೇನು ಹೀರಿ; ತಮ್ಮ ಮರಿಗಳಿಗೆ ರಸದ ಕುಟುಕಿತ್ತು ಪೋಷಿಸುವ ಬಾಣಂತಿ ದುಂಬಿಗಳು ಶೋಭಿಸುತ್ತಿದ್ದವು!

ಆ ಕೊಳದಲ್ಲಿ ಜಲಕ್ಕೆ ಇನ್ನೊಂದು ಹೆಸರಾದ ವಿಷವಿತ್ತು, ಪ್ರಾಣಕ್ಕೆ ಹಾನಿಕಾರಕವಾದ ವಿಷವಿರಲಿಲ್ಲ. ಅಲ್ಲಿ ಕಮಲಪುಷ್ಪವಿತ್ತು, ಕೊಳೆಯಾದ ನೀರು ಇರಲಿಲ್ಲ. ಅಲ್ಲಿ ಕುಮುದ ಪುಷ್ಪವಿತ್ತು, ಅಸಂತೋಷದ ಕುಮುದವಿರಲಿಲ್ಲ. ಆ ಕೊಳದಲ್ಲಿ ಪ್ರತಿಕೂಲವೆಂಬ ಆಚೆಯ ದಡವಿತ್ತು, ವ್ಯತಿರಿಕ್ತವಾದದ್ದು ವಿರುದ್ಧವಾದದ್ದು ಇರಲಿಲ್ಲ. ಅಲ್ಲಿ ವಿಜಾತಿಯ– ಬೇರೆ ಬೇರೆ ಪಕ್ಷಿಕುಲಗಳಿದ್ದವು, ಹೀನಕುಲವೆಂಬುದು ಅಲ್ಲಿರಲಿಲ್ಲ. ವಸುಧೆಯಲ್ಲಿ ಅಂತಹ ವಿಚಿತ್ರಕೊಳವನ್ನು ನೋಡಿ ರಾಜನು ಹರ್ಷಚಿತ್ತನಾದನು.

ರಾಜನು ಅಲ್ಲಿಯ ಮಂಗಳಮಯ ಶೈತ್ಯಶಾಲೆಗೆ ಪತ್ನಿ ಪುತ್ರರೊಡನೆ ಆಗಮಿಸಿದನು. ಅಲ್ಲಿನ ಬೆಡಗಿನ ಸ್ತ್ರೀಯರು ಹೂವಿನ ತೊಡಿಗೆಯನ್ನು ರಾಜನಿಗೆ ನೀಡಿದರು. ರಾಜನು ಆ ತೊಡಿಗೆಯನ್ನು ಮೊದಲು ಶಿವನಿಗೆ ಅರ್ಪಿಸಿ ನಂತರ ತಾನು ತೊಟ್ಟನು! ಮನ್ಮಥನಂತೆ ಶೋಭಿಸಿದನು! ಮಧ್ಯಾಹ್ನದ ಸೂರ್ಯನ ಬಿಸಿಲಿನಿಂದ ಬಳಲಿದ ರಾಜನು ಜಲಕೇಳಿಗೆ ಮನಸ್ಸುಕೊಟ್ಟನು.

ಅವನೀಶ ಹರಿಶ್ಚಂದ್ರನು ರಾಣಿಯರೊಡನೆ ಓಕುಳಿಯಾಡುವ ನೆವದಿಂದ ಸೋಂಕಿನ ಸುಖವನ್ನು ಪಡೆದನು. ಅನಂತರ ಹೊರಬಂದು ದಿವ್ಯಾಂಬರಗಳನ್ನು ತೊಟ್ಟನು. ಎಳಲತೆಯ ಹಸಿರ ಹಾಸಿನ ಮೇಲೆ ತಂಪಿನಲ್ಲಿ ಕುಳಿತನು. ಶಿವಾರ್ಚನೆಯನ್ನು ಮಾಡಲು ಹೂ ಕೊಯ್ದು ಬನ್ನಿ ಎಂದು ಮಾನಿನಿಯರಿಗೆ ಹೇಳಿದನು.

ಕಾಮಿನಿಯರು ಹೊಳೆವ ಮುತ್ತಿನ ರಂಗೋಲಿಯನ್ನು ಇಟ್ಟರು. ಎಳದಳಿರ ಹಸೆಯ ಹಾಸಿನ ಮೇಲೆ ಹೊಂಗೊಡದಲ್ಲಿ ಅಭಿಷೇಕಕ್ಕೆ ಉಪಯೋಗಿಸುವ ಮಡಿನೀರು–ಅಗ್ಗಣಿಯನ್ನು ತುಂಬಿಟ್ಟರು. ಮಂಗಳಕರವಾದ ಐದು ಬಗೆಯ ವಾದ್ಯಗಳು ಮೊಳಗಲು ರಾಜನು ದೀಪದಾರತಿ ಮಾಡಿ ಲಿಂಗಾರ್ಚನೆಯನ್ನು ಮಾಡಿದನು.

ರಾಣಿ ಚಂದ್ರಮತಿ, ಪುತ್ರ ಲೋಹಿತಾಶ್ವ, ಮಂತ್ರಿ ಮಾನ್ಯರು, ಸಕಲ ಪರಿಜನರ ಜೊತೆಯಲ್ಲಿ ಕುಳಿತು ಮೃಷ್ಟಾನ್ನವನ್ನು ಸವಿದನು.

**ಅವನೀಶ್ವರಂ ವನದೊಳು ವಸಂತಸುಖಮಂ ಸವಿದನು**

ಹರಿಶ್ಚಂದ್ರನು ಪತ್ನಿ ಪುತ್ರರೊಡಗೂಡಿ ಎಳಲತೆಗಳ ಎಡೆಯಲ್ಲಿ, ಹೂವಿನ ಕೊಳಗಳಲ್ಲಿ, ಮರಳ ದಿಣ್ಣೆಗಳಲ್ಲಿ, ಕೆಂದಳಿರ ಹಾಸುಗಳಲ್ಲಿ, ಶೈತ್ಯ ಶಾಲೆಗಳಲ್ಲಿ, ಹೂ ಬಿಡಿಸುವ ಎಡೆಗಳಲ್ಲಿ, ಜಲಕೇಳಿಗಳಲ್ಲಿ, ಖಗವಿನೋದಗಳಲ್ಲಿ, ಫಲರುಚಿ ಸೇವನೆಯಲ್ಲಿ, ವಿದ್ಯಾಗೋಷ್ಠಿಗಳಲ್ಲಿ ಕಾಲವನ್ನು ಕಳೆಯುತ್ತ ವನದಲ್ಲಿ ವಸಂತಸುಖವನ್ನು ಸವಿದನು.

**ಅತ್ತನಾಡೊಳಗೆ ಕೌಶಿಕನ ಕಾಟಂ ಮೊಳೆತುದು**

ಆಗ ನಾಡಿನಲ್ಲಿ ವಿಶ್ವಾಮಿತ್ರಮುನಿಯ ಕಾಟ ಮೊಳೆಯಿತು. ಹೊಲಗಳಲ್ಲಿ ಮೊಳೆವ ಬೀಜಗಳನ್ನು ಕ್ರಿಮಿಕೀಟಗಳು ತಿಂದು; ಸಸಿ, ಹೊಡೆಯನ್ನ ಎಳಹುಲ್ಲೆಗಳು, ಜಿಂಕೆಗಳು ಮೇದವು. ತೆನೆಗಳನ್ನು ಗಿಳಿ, ನವಿಲು, ಕೊಂಚೆ ಮುಂತಾದ ಪಕ್ಷಿಗಳು; ಉಳಿದ ಬೆಳೆಯನ್ನು ಮುಂಗಸಿ ಹೆಗ್ಗಣಗಳು ತಿಂದು ಹಾಕಿದವು. ಕಾಯುವ ಬಲಿಷ್ಠ ಜನರನ್ನು ಸರ್ಪಗಳು ಕಡಿದು ಕೊಂದವು. ತೋಟದ ಗೆಡ್ಡೆ ಗೆಣಸು ಹಂದಿಯ ಪಾಲಾಗಿ; ಹಣ್ಣು, ಕಾಯಿ, ಕಬ್ಬುಗಳನ್ನು ಅಳಿಲುಗಳು ನಾಶ ಮಾಡಿದವು. ನೀರಿನಲ್ಲಿ ಮೊಸಳೆಗಳು ಹೆಚ್ಚಿ ಭಯಂಕರ ವಾತಾವರಣ ಸೃಷ್ಟಿಸಿದವು. ದಾರಿಯಲ್ಲಿ ಹಾದು ಹೋಗುವವರನ್ನು ಕರಡಿ, ಕಾಡುಕೋಣಗಳು ಕೊಂದು ಹಾಕಿದವು. ನಾಡಿನ ಜನರಲ್ಲಿ ಹಾಹಾಕಾರ ಉಂಟಾಗಿ, ಅವರು ತಮ್ಮ ಗೋಳನ್ನು ತೋಡಿಕೊಳ್ಳಲು ರಾಜನಿದ್ದ ಉಪವನಕ್ಕೆ ಬಂದರು.

**ಖಗಮೃಗದ ಕಾಟದಿಂದ ಧರೆಯೊಳಗೆ ಬೆಳಸಿಲ್ಲ ಬಿತ್ತಿಲ್ಲ ನೀರಿಲ್ಲ**

ಅವರು ಗುಳಿಕಣ್ಣಿ ಮುಖ, ನಡೆಗೆಟ್ಟ ಕಾಲು, ಬೆನ್ನುಹತ್ತಿದ ಹೊಟ್ಟೆಯಿಂದ ತಡೆಯಲಾಗದ ಹಸಿವು ನಿರಾಶೆಗಳೊಡನೆ 'ರಕ್ಷಿಸು ಶಿವಾ! ಶಿವಧೊ!' ಮೊರೆಯಿಡುತ್ತ ಬಂದರು.

ಬ್ರಾಹ್ಮಣರು ಮಂತ್ರಾಕ್ಷತೆಯನ್ನು ನೀಡಿ, ಶಿವಭಕ್ತರು ವಿಭೂತಿಯನ್ನು ಕೊಟ್ಟು, ಉಳಿದ ಜನರೆಲ್ಲ ತಮಗೆ ಉತ್ತಮವೆಂದು ಕಂಡುಬಂದ ವಸ್ತುಗಳನ್ನು ಕಾಣಿಕೆಯಿತ್ತು ಕೈ ಮುಗಿದು,

'ನಮ್ಮ ಅರಸನೇ, ಸಪ್ತದ್ವೀಪವನ್ನು ಆಳುವ ನಿನ್ನ ರಾಜ್ಯಭಾರದಲ್ಲಿ ಇದುವರೆಗೆ ಅಡ್ಡಿ ಆತಂಕ ಭಯವೊಂದನ್ನು ನಾವು ಕಾಣೆವು' ಎಂದು ತಮ ತಮಗೆ ಹೇಳಿಕೊಂಡು ಮಾತಾಡುತ್ತಿದ್ದರು. ಅದನ್ನು ಕೇಳಿ ಕೋಪಗೊಂಡ ರಾಜನು 'ಅದೇನೆಂದು ಸ್ಪಷ್ಟವಾಗಿ ಹೇಳಿ' ಎಂದು ಅಬ್ಬರಿಸಲು ಅವರು,

'ಪ್ರಭುವೆ, ನಮಗೆ ಯಾವುದೆ ಬಗೆಯ ಬಾಧೆಗಳಿಲ್ಲ, ಪರನೃಪರ ಭಯವಿಲ್ಲ. ಸಾಲದ ತೊಂದರೆಯಿಲ್ಲ. ಆದರೆ ಇದುವರೆಗೆ ಇಲ್ಲದ ಭಯ ಈಗ ಒದಗಿ ಬಂದಿದೆ. ಇದ್ದಕ್ಕಿದ್ದ ಹಾಗೆ ವನ್ಯಮೃಗಗಳು, ಪಕ್ಷಿಗಳು ಹೆಚ್ಚಾಗಿ ನಮ್ಮನ್ನು ಕಾಡುತ್ತಿವೆ. ಖಗಮೃಗದ ಕಾಟದಿಂದ ಭೂಮಿಯಲ್ಲಿ ಬೆಳಸು ಇಲ್ಲದೆ, ಬಿತ್ತಿಲ್ಲದೆ, ನೀರಿಲ್ಲದೆ ದುಸ್ಥಿತಿಯಲ್ಲಿದ್ದೇವೆ. ಎಲ್ಲವನ್ನೂ ತಿಳಿದ ನೀವು ನಮ್ಮ ಸಂಕಟವನ್ನು ಪರಿಹರಿಸಬೇಕು' ಎಂದು ನಿವೇದಿಸಿಕೊಂಡರು. ಹರಿಶ್ಚಂದ್ರ ರಾಜನು ಅವರ ಮೊರೆಯನ್ನು ಆಲಿಸಿ ಸಮಾಧಾನ ಹೇಳಿದನು. ಅವರಿಗೆ ಧನ ಧಾನ್ಯಗಳನ್ನು ಕೊಟ್ಟು ಸಂತೋಷಪಡಿಸುತ್ತ,

'ಅಂಜದಿರಿ, ನಾಳೆ ಹೊರಟು ಬರುವೆ. ಖಗಮೃಗಗಳನ್ನು ಬೇಟೆಯಾಡಿ ಕೊಲ್ಲುವೆ' ಎಂದು ಪ್ರೀತಿಯಿಂದ ಹೇಳಿ ಕಳುಹಿಸಿದನು.

ಅಂದು ಸಂಜೆಯಾಗಲು ಸೂರ್ಯನು ಪಶ್ಚಿಮ ಕಡಲನ್ನು ಸೇರಿದನು. ಆಗ ಸೂರ್ಯನು ಸಂಧ್ಯಾಂಗನೆಗೆ ಸಮುದ್ರವು ನಿವಾಳಿಸಲೆಂದು ಎತ್ತಿದ ಮಾಣಿಕ್ಯದ ದೊಡ್ಡ ಆರತಿಯೋ; ದಿನ ರಾತ್ರಿಗಳನ್ನು ಅಳೆದು ಹೊಲದ ಮೇರೆಯಲ್ಲಿ ನಡಲೆಂದು ವರುಣ ನಿಲ್ಲಿಸಿದ ಹವಳದ ಒಂದು ಗಡಿಕಲ್ಲೊ; ಬೆಳಗು ಎಂಬ ಲತೆಯೊಲೆದು ಕುಡಿಹೊಮ್ಮಿ ಮಾಗಿದ ಹಣ್ಣೊ; ಪಶ್ಚಿಮ ದಿಶಾಂಗನೆಯ ಮುಂದಲೆಯನ್ನು ಬೆಳಗುವ ಚೂಡಾರತ್ನವೊ ಎಂಬಂತೆ ಹಗಲ ಕೊನೆಯಲ್ಲಿ ರವಿ ಕಣ್ಣಿಗೆ ಸೊಗಸಿದನು. ಆಗ ಪೂರ್ವದಲ್ಲಿ ಚಂದ್ರನು ಕಾಣಿಸಿಕೊಂಡನು. ಸೂರ್ಯ ಮತ್ತು ಚಂದ್ರರು ವರುಣ ಮತ್ತು ದೇವೇಂದ್ರರು ಕಾದಲು ಹಿಡಿದಿರುವ ಕೆಂಪಾದ ಗುರಾಣಿಗಳಂತೆ ಕಾಣುತ್ತಿದ್ದರು!

**ಮೂಡಿದಂ ಶಶಿ ನಾಲ್ಕುದೆಸೆಯ ದಿಗುಭಿತ್ತಿಯಂ ಧವಳಿಸುತೆ**

ರಾತ್ರಿಯಲ್ಲಿ ಮೂಡಿದ ತಾರೆಗಳು ಮನೋಹರ ಬೆಳದಿಂಗಳಿನ ಬೀಜವೋ; ಚಂದ್ರ ಚಕೋರಿಗಳಿಗೆ ನೀಡುವ ಗುಟುಕೋ; ಗಗನರಮಣಿಯ ಹೂ ಮಾಲೆಯೋ; ನಿಶಾರಾಣಿಯು ಹೊಳೆಯುವ ದುಂಡುಮಲ್ಲಿಗೆಯ ಹೂಗಳಿಂದ ಗಗನವನ್ನು ಒಲಿದು ಆರಾಧಿಸುತ್ತಿರುವಳೋ ಎಂಬಂತೆ ಕಂಡವು.

ಕ್ಷೀರಸಾಗರವು ವಾತ್ಸಲ್ಯದಿಂದ 'ನನ್ನ ಮಗನು ಇಂದು ಬಂದು ದಟ್ಟಡಿಯಿಡುವ ರಾಜಾಂಗಣವಿದು' ಎಂದು ತಿಳಿದು, ನೆಗೆವ ತೆರೆಗಳಿಂದ ಸಾರಣೆ ಮಾಡಿ, ಮಲ್ಲಿಗೆಯ ಹೂವುಗಳನ್ನು ಹರಡಿ ಗಗನವನ್ನು ಅಲಂಕರಿಸಿರುವಳೊ ಎನ್ನುವಂತಿತ್ತು! ಆಗ

ಚಂದ್ರನು ದಶದಿಕ್ಕುಗಳಿಗೆ ತನ್ನ ಅಮೃತ ಕಿರಣವನ್ನು ಬೀರಿ ತಾರೆಗಳೊಡನೆ ಪೂರ್ವಗಿರಿ ಮಸ್ತಕದಲ್ಲಿ ಉದಯಿಸಿದನು!

ಅಂತಹ ಮಧುರ ಬನವನ್ನು ವೀಕ್ಷಿಸಿ ಆನಂದದಿಂದಿರುವ ಸಮಯದಲ್ಲಿ ಮಂತ್ರಿ ಸತ್ಯಕೀರ್ತಿಯು ರಾಜನಿಗೆ ಬಿನ್ನವಿಸಿದನು.

'ಮಹಾಪ್ರಭುವೆ, ವನವನ್ನು ಪ್ರವೇಶಿಸಿ ತಿಂಗಳಾಯಿತು. ನಾಳೆ ಬೇಟೆಯ ಉತ್ಸವಕ್ಕೆ ಹೊರಟು ಖಗಮೃಗಗಳನ್ನು ಬೇಟೆಯಾಡಿ ಜನರ ಕಷ್ಟ ಪರಿಹರಿಸಬೇಕಾಗಿದೆ. ಆದ ಕಾರಣ ಈ ರಾತ್ರಿ ನಗರದಲ್ಲಿಯ ರಾತ್ರಿ ವಿನೋದಗಳನ್ನು ನೋಡುವುದು ಲೇಸು. ಭೂನಾಥರು ಇದರತ್ತ ಗಮನ ಕೊಡಬೇಕು.'

ಆ ನುಡಿ ಕೇಳಿ ರಾಜ ಹರಿಶ್ಚಂದ್ರನು,

'ಸತ್ಯಕೀರ್ತಿಯೆ ನೀನು ಹೇಳುವುದು ನಿಜ. ಒಂದು ತಿಂಗಳು ಕಳೆದುದು ತಿಳಿಯಲಿಲ್ಲ. ಪ್ರಜೆಗಳಿಗುಂಟಾಗಿರುವ ಖಗಮೃಗದ ಬಾಧೆಯನ್ನು ಮೊದಲು ಪರಿಹರಿಸಬೇಕು. ಜನರ ಹರುಷ, ವಿಷಾದ ನನ್ನ ಮನಸ್ಸಿನಲ್ಲಿ ನೆಲಸಿದೆ. ಇಂದು ಪುರದ ಸಂಚಾರಕ್ಕೆ ಹೊರಡೋಣ' ಎಂದು ಹೇಳಿ ವನಪಾಲಕರಿಗೆ ಉಡುಗೊರೆ ಯಿತ್ತನು. ಚೆಲುವೆಯರ ಅಂದಣ ಮುಂದೆ ಸಾಗಲಿ, ಪರಿವಾರವು ಮುಂದೆ ಹೋಗಲಿ ಎಂದು ಹೇಳಿ ನಗರ ಪ್ರದಕ್ಷಿಣೆಗೆ ಹೊರಟನು.

## ನಗರ ಪ್ರದಕ್ಷಿಣೆ

ಮಂತ್ರಿಯ ಮಾತಿಗೆ ಒಪ್ಪಿದ ಹರಿಶ್ಚಂದ್ರ ರಾಜನು ಸಕಲ ಸೈನ್ಯವನ್ನು, ಕದನ ಕಲಿಗಳನ್ನು, ರಾಣಿ ವಾಸದವರನ್ನು ಹಿಂದಕ್ಕೆ ಕಳುಹಿಸಿದನು. ಮುತ್ತಿನಹಾರ, ಪದಕ, ತೋಳಸರಿಗೆ, ಕರ್ಣಕುಂಡಲ, ನವಮಣಿಯ ಕಿರೀಟಗಳನ್ನು ಧರಿಸಿಕೊಂಡನು. ಹಣೆಗೆ ಕಸ್ತೂರಿಯ ತಿಲಕವನ್ನಿಟ್ಟುಕೊಂಡು, ಸುಗಂಧವನ್ನು ಮೈಗೆ ಹಚ್ಚಿಕೊಂಡು, ಮರಿದುಂಬಿ ಎರಗುವ ಕದಂಬ ಕುಸುಮವನ್ನು ಮುಡಿದುಕೊಂಡು ಶುಭ್ರ ವಸ್ತ್ರವನ್ನು ಉಟ್ಟನು. ಹಡಪಿಗನು ನೀಡುವ ವೀಳೆಯದೆಲೆಯನ್ನು ಮೆಲ್ಲಲು ಅದರ ಕೆಂಪು ಅವನನ್ನು ಅತಿಚೆಲುವನನ್ನಾಗಿಸಿತು. ಮನ್ಮಥನ ಕತ್ತಿಯೋ ಎಂಬಂತೆ ಹೊಳೆಯುತ್ತ ಹತ್ತೆಂಟು ಮಂತ್ರಿಗಳ ಜೊತೆ ನಗರವನ್ನು ಪ್ರವೇಶಿಸಿದನು.

ಅಲ್ಲಿ ಜಾಣಿನ ಜನ್ಮ ಭೂಮಿ, ಶೃಂಗಾರದ ಮಡು, ಮೋಹನದ ಬೀಡು, ಸೊಬಗಿನ ಸೀಮೆ, ಚಾತುರ್ಯದ ಚಾವಡಿ, ಪೈಪೋಟಿಯ ಎಡೆ, ಉಪಚಾರದ ಬಿಡಾರ, ಹುಸಿಯನ್ನು ಮಾರುವ ಸ್ಥಳ, ಕೃತಕದ ಕೇರಿ, ಬಯಕೆಯ ಆವಾಸವಾದ ವೇಶ್ಯಾವೀಧಿಯನ್ನು ಹೊಕ್ಕನು. ಅಲ್ಲಿ ನಾಲ್ಕೂ ಕಡೆಯೂ ಬಾಗಿಲುಗಳುಳ್ಳ ಉಪ್ಪರಿಗೆಯ, ಮೊಗಸಾಲೆಗಳನ್ನು ಹೊಂದಿದ ತರ ತರದ ಭವನಗಳಿದ್ದವು. ಅವು ಸ್ಫಟಿಕದಿಂದ

ನಯವಾಗಿರುವ ನೆಲೆಗಟ್ಟು, ಚಂದ್ರಕಾಂತಶಿಲೆಯಿಂದ ಶೃಂಗರಿಸಿದ ಗೋಡೆಗಳು, ವಜ್ರದ ಕಂಬ, ಹವಳದ ತೊಲೆ, ಪುಷ್ಯರಾಗ ರತ್ನದಿಂದ ಪ್ರಕಾಶಿಸುವ ಜಂತೆ, ಪಚ್ಚೆಯ ಚೌಕಟ್ಟಿನ ಚಾವಣಿಗಳನ್ನು ಹೊಂದಿ ಮಾಣಿಕ್ಯದ ಕಲಶಗಳಿಂದ ಕೂಡಿದ್ದವು. ಅಂತಹ ಭವನದ ಒಳಗೆ ಹಂಸಗಮನದ, ಚತುರೋಕ್ತಿಯನ್ನಾಡುವ, ಬೆರಗುಗಣ್ಣಿನ ಕೆಂದುಟಿಯ ಚೆಲುವೆಯರು ಸುಳಿದಾಡುವುದನ್ನು ರಾಜನು ಕಂಡನು.

ಆ ಲಲನೆಯರ ಒಲೆದಾಡುವ ಸೆರಗು ಬಾವುಟ, ಮುಂಗುರುಳುಗಳು ತೋರಣ, ಕುಚಗಳು ಕಲಶ, ಮುಖ ಕನ್ನಡಿ, ಕೈ ತಳಿರು, ಉಗುರು ಕುಸುಮ, ಹುಬ್ಬು ಕಬ್ಬಿನ ಬಿಲ್ಲಾಗಿ; ಅವರ ಮುಡಿಕಂಪಿಗೆ ತಿರುಗುವ ದುಂಬಿಗಳು ಛತ್ರಿಗಳಾಗಿ, ಬಳೆಗಳ ಝುಣತ್ಕಾರ ವಾದ್ಯ ಸಂಕುಳವಾಗಿ ಹರಿಶ್ಚಂದ್ರ ರಾಜನನ್ನು ಇದುರುಗೊಳ್ಳುವಂತೆ ಕಾಣುತ್ತಿತ್ತು.

ಅಲ್ಲೊಂದು ಉಪ್ಪರಿಗೆಯಮೇಲೆ ನಿಂತಿದ್ದ ಲಲನೆಯು ಬಿಳಿಯುಡುಗೆಯುಟ್ಟು, ಮೈಗೆ ಶ್ರೀಗಂಧವನ್ನು ಪೂಸಿಕೊಂಡು, ಮಲ್ಲಿಗೆ ಮುಡಿದು, ಹೊಳೆವ ದಂತಪಂಕ್ತಿಗಳಿಂದ ನಗೆ ಮೊಗದಲ್ಲಿದ್ದಳು. ಅವಳು ಧರಿಸಿದ್ದ ಮುತ್ತಿನ ತೊಡಿಗೆಗಳ ಬೆಳಕು ಬೆಳದಿಂಗಳಂತೆ ಆ ಬೀದಿಯನ್ನು ಆವರಿಸಿತ್ತು! ಅವಳು ಬಿಳಿ ಮುಗಿಲ ಮೇಲೆ ಬೆಳಗುವ ಚಂದ್ರಕಲೆಯೋ ಎನ್ನುವಂತೆ ಸೊಗಸಾಗಿ ಕಾಣುತ್ತಿದ್ದಳು!

ಆ ವೇಶ್ಯಾವಾಟದ ಉಪ್ಪರಿಗೆಗಳಲ್ಲಿ ಒಂದು ಕಡೆ ಪಗಡೆ, ಚದುರಂಗ ಆಡುವವರಿದ್ದರೆ; ಇನ್ನೊಂದು ಕಡೆ ವೀಣೆಯನ್ನು ಅಭ್ಯಾಸ ಮಾಡುವ, ಗೀತ ವಾದ್ಯಗಳನ್ನು ಕಲಿಯುವವರು ಇದ್ದರು. ಅಲ್ಲಿ ಕೆಲವರು ಗಿಳಿಗಳಿಗೆ ಮಾತು ಕಲಿಸುತ್ತಿದ್ದರೆ ಮತ್ತೆ ಕೆಲವರು ಕಾಮಶಾಸ್ತ್ರದ ಪಾಠ ಹೇಳಿಕೊಡುತ್ತಿದ್ದರು! ಶೃಂಗಾರಗೊಂಡ ಸ್ತ್ರೀಯರು ವೇಶ್ಯಾವಿಡಂಬನ ಕಥೆ ಕೇಳುತ್ತ ನಲ್ಲರ ಗೋಷ್ಠಿಯಲ್ಲಿ ನಲಿದಾಡುತ್ತಿದ್ದರು! ಅದೆಲ್ಲವನ್ನು ನೋಡುತ್ತ ರಾಜನು ನಡೆದನು.

ಅಲ್ಲಿ ಒಂದೆಡೆ ಚಿಟ್ಟುಮರಿಯೆಂಬ ಜೂಟಾಟ ಆಡುವ ಕೋಮಲೆಯರು ಒಬ್ಬರನ್ನೊಬ್ಬರು ಅಟ್ಟಿ ಆಡಿಸುವಾಗ ಅವರ ಮುಂಗುರುಳುಗಳು ದುಂಬಿ ದುಂಬಿಯನ್ನು ಅಟ್ಟುವಂತಿದ್ದವು! ಕಣ್ಣುಗಳು ಹೂ ಬಾಣಗಳು ಪರಸ್ಪರ ಹಿಮ್ಮೆಟ್ಟಿಸುವಂತಿದ್ದವು! ಮುಖಗಳು ಒಂದು ಚಂದ್ರಬಿಂಬ ಮತ್ತೊಂದನ್ನು ಮುತ್ತುವಂತಿದ್ದವು! ತೋಳುಗಳು ಕುಡಿಲತೆಯೊಂದು ಇನ್ನೊಂದರೊಡನೆ ಜೋಲಾಡುವಂತಿದ್ದವು! ಸ್ತನಗಳು ಚಕ್ರ ಚಕ್ರವನ್ನು ಬೆನ್ನಟ್ಟುವಂತಿದ್ದವು! ಪಾದಗಳು ಹಂಸ ಹಂಸಗಳನ್ನು ಅಟ್ಟಿಸಿಕೊಂಡು ಹೋಗುವಂತೆ ಬೀಗುತ್ತಿದ್ದವು!

## ಮುಡಿಯ ಪರಿಮಳದೊಡನೆ ಮರಿದುಂಬಿಗಳು ಪರಿಯೆ

ಮತ್ತೊಂದೆಡೆಯಲ್ಲಿ ಚೆಲುವೆಯರು ತೋಳುಗಳನ್ನು ವಿವಿಧ ವಿನ್ಯಾಸದಲ್ಲಿ ತಿರುವುತ್ತ ಕೋಲಾಟವಾಡುತ್ತಿದ್ದರು. ಆಗ ಅವರ ಮುಡಿಯ ಪರಿಮಳದೊಡನೆ ಮರಿದುಂಬಿಗಳು ಹಾರಾಡುತ್ತಿದ್ದರೆ, ಅವರ ನಡೆಗೆ ತಕ್ಕಂತೆ ಹಂಸಗಳು ಹೆಜ್ಜೆ ಹಾಕುತ್ತಿದ್ದರೆ, ಅವರ ಚದುರನುಡಿ ಕೇಳಿ ಗಿಳಿಗಳು ಅವರಂತೆ ನುಡಿಯುತ್ತಿದ್ದವು! ಅವರ ಒಯ್ಯನೆ ಕುಣಿವ ಕುಚದೊಡನೆ ಚಕ್ರವಾಕ ಪಕ್ಷಿಗಳು ಕುಣಿಯುತ್ತಿದ್ದರೆ, ಒಡಲ ಚೆಲುವಿನೊಡನೆ ನೋಟಕರ ದೃಷ್ಟಿ ವಿನೋದದಿಂದ ಹಿಗ್ಗುತ್ತಿತ್ತು!

ಓರ್ವ ಕಾಂತೆಯು ಮಾಳಿಗೆಯ ಅಂಗಣದಲ್ಲಿ ಪುಟ್ಟಿವ ಚೆಂಡಿನೊಡನೆ ಆಡುತ್ತಿದ್ದಳು. ಆಗ ಅವಳ ಅಂದುಗೆ, ಮಂಟಿಗೆಯೆಂಬ ಕಾಲುಂಗುರ, ಕಡಗದ ಜಣತ್ಕಾರದೊಡನೆ; ಬಳೆಗಳ ಸದ್ದು, ಸೊಂಟದ ಕಿಂಕಿಣಿಗಳ ಗೆಜ್ಜೆನಾದ ಕೂಡಿರುವಾಗ– ಒಟ್ಟುಗೂಡುವ ಕುಚಗಳ ಮಧ್ಯದಲ್ಲಿ ಶೋಭಿಸುವ ಹಾರ ಒಲೆದಾಡುತ್ತಿತ್ತು!

ಅಲ್ಲೊಂದು ಕಡೆ ಯುವತಿಯರು ಹರುಷದಿಂದ ಉಯ್ಯಾಲೆಯನ್ನು ಏರಿ ಒಲೆದಾಡುತ್ತಿದ್ದರು. ಆ ಉಯ್ಯಾಲೆ ರತಿದೇವಿಯು ಮನ್ಮಥನು ಬರುವನೆಂದು ತೋರಣ ಕಟ್ಟಿದಂತಿತ್ತು! ಅದು ಮುತ್ತು ಪಚ್ಚೆಯಿಂದ ರಚಿಸಿದ ಕಂಬ ಹಾಗೂ ಪದ್ಮರಾಗವೆಂಬ ಕೆಂಬಣ್ಣದ ರತ್ನದಿಂದ ಮಾಡಿದ ಮಣೆಯನ್ನು ಹೊಂದಿತ್ತು!

ಅಂತಹ ಉಯ್ಯಾಲೆಯಾಡುತ್ತ ಅವರಲ್ಲಿ ಓರ್ವ ಸುಂದರ ತರುಣಿಯು ಜಗತ್ತು ತಿಳಿದ ಹಾಗೆ ಚಂದ್ರನು ಕಳಂಕ, ಕಳಾಹೀನ; ಹಾವು ಅಗಿದು ಉಗಿದಿರುವ ವಿಷಮುಖದವನು; ದೋಷಿ, ಅಸ್ಥಿರ, ಅಂಜುಬುರಕ, ಶ್ವೇತಾಂಗ, ಅಂತಹವನು ತನ್ನೆದುರು ಬಂದನೆಂದು ಕೋಪಗೊಂಡು ಒದೆಯುತ್ತಿರುವಳೋ ಎಂಬಂತೆ ಉಯ್ಯಾಲೆಯ ಮಣೆಯನ್ನು ಒದ್ದಳು!

ಚಂದ್ರನ ಬೆಳಕಿರುವ ರಮ್ಯ ಗೃಹಗಳಲ್ಲಿ ನಲ್ಲರೊಡನೆ ಕೂಡಿ, ಆನಂದ ತನು ಪುಳಕದ ಶ್ರಾಂತಬಿಂದುಗಳು ಆರಲೆಂದು–ಗೃಹಾಂಗಣದಲ್ಲಿ ನಿಂತು ತಂಗಾಳಿಯ ಸೋಂಕಿಗೆ ನಲಿವ ಲಲಿತಾಂಗಿಯರನ್ನು ರಾಜನು ಕಂಡನು.

ಹೀಗೆ ರಾತ್ರಿ ನಗರದಲ್ಲಿ ಸುತ್ತಾಡುತ್ತ, ಅನಂಗರಾಗದಲ್ಲಿ ಒಂದಾದ ಹೆಣ್ಣು ಗಂಡುಗಳ ವಿವಿಧ ವಿನೋದವನ್ನು ಕಂಡು ರಾಜನು ಹರ್ಷಚಿತ್ತನಾಗಿ ಅರಮನೆಗೆ ಬಂದನು. ಸ್ನಾನವನ್ನು ಮಾಡಿ ಸೇನಾ ಪ್ರಮುಖರೊಡಗೂಡಿ ಭೋಜನವನ್ನು ಮಾಡಿದನು. ಶಯ್ಯಾಗೃಹಕ್ಕೆ ಹೋಗಿ ಸುಖನಿದ್ರೆಗೆ ಒಳಗಾದನು. ಇತ್ತ ಅಗಸದಲ್ಲಿ ಚಂದ್ರಮನ ಸೊಬಗು ಬಾಡಿತ್ತು. ರಾತ್ರಿ ಸತಿಯ ಯೌವ್ವನ ಹಳೆಯದಾಯಿತು. ಅಂದಿನ ಮಹಾರಾತ್ರಿ ಕಳೆದುಹೋಯಿತು.

ಅರುಣೋದಯವಾಗಲು ತಂಬೆಲರು ತೀಡಿತು. ಪಂಚ ಮಹಾವಾದ್ಯಗಳು ಮೊಳಗಿದವು. ದೇವಾಲಯಗಳಲ್ಲಿ ಶಂಖನಾದವು ಮೊಳಗಿತು. ಅರಮನೆಯಲ್ಲಿ ಗಾಯಕಿಯರು ಹಾಡಿ, ಪುಣ್ಯಪಾಠಕರು ರಾಜನನ್ನು ಹೊಗಳಿದರು. ಉದಯಗಿರಿಯ ಶಿಖರಾಗ್ರದಲ್ಲಿ ರವಿಯು ಕಿರಣಗಳನ್ನು ಬೀರಿ ಹೊಳೆ ಹೊಳೆಯುತ್ತ ಮೂಡಿಬಂದನು.

ಮಹಾರಾಜ ಹರಿಶ್ಚಂದ್ರನು ನಂಜುಂಡೇಶ್ವರನನ್ನು ಧ್ಯಾನಿಸುತ್ತ ಮೇಲೆದ್ದನು. ಘೃತವನ್ನು ನೋಡಿ ಅನಂತರ ರತ್ನ ಖಚಿತವಾದ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡನು. ಬುಧಜನರಿಂದ ಮಂಗಳಾಶೀರ್ವಾದವನ್ನು ಪಡೆದನು. ಗೋವುಗಳನ್ನು ಮುಟ್ಟಿ ನಮಸ್ಕರಿಸಿದನು. ಪುಣ್ಯಪಾಠಕರ ಶುಭ ನುಡಿಯನ್ನು, ಮಂಗಳ ವಾದ್ಯವನ್ನು ಕೇಳುತ್ತ ಸ್ನಾನಗೃಹಕ್ಕೆ ನಡೆದನು.

ಸ್ನಾನ ಸಂಧ್ಯಾವಂದನೆ ಮುಗಿಸಿ, ಶಾಂತ ಸುಖ ಮನಸ್ಸಿನಿಂದ ಶಿವಲಿಂಗ ಪೂಜೆಯನ್ನು ಮಾಡಿದನು. ಪ್ರತಿ ನಿತ್ಯದಂತೆ ದಾನ ಧರ್ಮಗಳನ್ನು ಮಾಡಿ ವೈರಿರಾಜರೆಂಬ ಮದಗಜಗಳಿಗೆ ಸಿಂಹಪ್ರಾಯನಾದ ಹರಿಶ್ಚಂದ್ರರಾಜನು ಸಿಂಹಾಸನದಲ್ಲಿ ಆಸೀನನಾದನು.

## ಹೇರಡವಿ ಗೋಳಿಡಲು ದಾಳಿಕ್ಕಿದಂ

**ಭೂ**ಪಾಲಕ ಹರಿಶ್ಚಂದ್ರನು ಓಲಗವನ್ನು ನಡೆಸುತ್ತ ಬೇಟೆಗೆ ಹೊರಡಲು ಶಬರ ಸೇನೆಯನ್ನು ಕರೆತರುವಂತೆ ಆಜ್ಞೆ ಮಾಡಿದನು.

ಸಭೆಗೆ ಬಂದ ಬೇಡನಾಯಕರು ಕಪ್ಪು ಮೈ, ನಿಮಿರಿದ ಕೂದಲು, ಕೆಂಪಾಗಿ ಹೊಳೆವ ದಪ್ಪ ಕಣ್ಣು, ಕೆಮ್ಮೀಸೆ, ಕೆದರಿದ ತಲೆಯಿಂದ ಕೂಡಿದ್ದರು. ಅವರು ಕಾಳಸರ್ಪದಂತಿರುವ ತೋಳು, ಬಿಲ್ಲಿಗೆ ಕಟ್ಟುವ ಹುರಿ – ನಾರಿಯನ್ನು ಹೊಡೆ ಹೊಡೆದು ಹುಣ್ಣಾದ ಕೈ, ಅಗಲವಾದ ಎದೆ, ಕಿರುನಡು, ಕೊಬ್ಬಿದ ಹೆಗಲಿನ ಗಟ್ಟಿ ಆಳುಗಳಾಗಿದ್ದರು. ಅವರು ನೀಳವಾದ ಬಿಲ್ಲು, ಹರಿತವಾದ ಬಾಣಗಳನ್ನು ಹಿಡಿದು ಬಂದದ್ದು ಕಾಂತಿಯುತ ಸಭೆಯನ್ನು ಕರ್ಬೊಗೆ ಮುಸುಕಿದಂತಾಯಿತು!

ಆ ಬೇಡರ ಒಡೆಯರು ಸಂಭ್ರಮ ಸಡಗರದಿಂದ ಬಂದರು. ಹೊಳೆಯುತ್ತ ಮಿಡುಕುವ ಮೀನಿನ ಗುದಿಗಳು, ಆನೆಯ ದಂತ, ಜೇನು ತುಂಬಿದ ಬಿದಿರ ಪಾತ್ರೆ, ನವಿಲುಗರಿ, ಸಿಂಹದ ಉಗುರು, ಹುಲಿಯ ಚರ್ಮ, ಹಂದಿಯ ಮರಿಗಳು, ಪುನುಗು ಬೆಕ್ಕನ್ನು ಮಹಾರಾಜನಿಗೆ ಕಾಣಿಕೆಯಾಗಿ ಕೊಟ್ಟು ನಮಸ್ಕರಿಸಿದರು.

### ಹುಲಿ ಹೊಯ್ದು ಜರಿದ ಹೆಗಲ ಚಿಹ್ನದ ಬೇಡನಾಯಕರು

ಅವರ ಮೈಯಲ್ಲಿ ಮದಗಜ ಇರಿದ ಗಾಯ, ಕಾಡುಹಂದಿ ಕಡಿದು ಆದ ಡೊಗರು, ಸಿಂಹ ಉಗಿದು ಬಗೆದು ತೋಡಿದ ಕೊರೆತಗಳು, ಕರಡಿ ಕೋಪಗೊಂಡು ಬಗೆದ ತೋಳು, ಹುಲಿಯೊಡನೆ ಹೋರಾಡಿ ಜರಿದ ಹೆಗಲು, ಕೋಣನ ಜೊತೆ ಸೆಣಸಿ ಆದ ಮೈರಂಧ್ರಗಳು ಢಾಳಾಗಿ ಕಾಣುತ್ತಿದ್ದವು. ಗಂಡಭೇರುಂಡ ಎರಗಿ ಆದ ಗಾಯದ ಗಂಟುಗಳು, ಕಡವೆ ತುಳಿದ ಹೆಜ್ಜೆ ಗುರುತುಗಳು ಅವರ ಕಾಡ ಬದುಕಿನ ಸಾಹಸ ಚಿಹ್ನಗಳಾಗಿದ್ದವು!

ಬೇಡರ ಪರಮಾಪ್ತ ಜೊತೆಗಾರರೆಂದರೆ ನಾಯಿಗಳು, ಅವುಗಳ ಹೋರಾಟ ಸಾಹಸಕ್ಕೆ ತಕ್ಕಂತೆ ಬೇಡರು ಅವುಗಳಿಗೆ ವಿಶೇಷ ಬಿರುದು ನೀಡಿ ಕರೆಯುತ್ತಿದ್ದರು. ಹರಿದಲ್ಲಣ, ಹುಲಿಬಾಕ, ಸಾರಂಗ ಮರ್ಧನ, ಮರೆಮಾರಿ, ಕಾಳ್ಕೋಣ ಕಂಟಕ, ಭಲ್ಲೂಕಮಲ್ಲ, ಕರಿಸಿಂಹ, ಸಿಂಹಪ್ರಕರ ಶರಭ, ಶರಭ ಭೇರುಂಡ ಎಂಬ ಬಿರುದು ಬಾವಲಿಯ ನಾಯಿಗಳು ಅವರ ಜೊತೆಗೆ ಆಸ್ಥಾನದಲ್ಲಿ ನೆರೆದವು.

## ಧೀರ ಬೇಟೆಗಾರರ ಕಲಾ ಚಾತುರ್ಯದ ಬಲೆಗಳು

ಮೃಗಗಳಿಗೆ ಕಡೆಗಾಲವನ್ನುಂಟು ಮಾಡುವ ಖಗಹೃದಯ ಶೂಲರಾದ ಚತುರ ಕಿರಾತರು ಹಲವು ಬಗೆಯ ಬಲೆಗಳನ್ನು ಹೊತ್ತು ತಂದಿದ್ದರು. ಅವು ಅವರ ಕಾಡಿನ ಹೋರಾಟದ, ಸಾಹಸದ ಬದುಕು ಸೃಷ್ಟಿಸಿದ ಸೂಕ್ಷ್ಮ ಕಲಾ ಚಾತುರ್ಯದ ಅನಾವರಣದಂತಿದ್ದವು!

ತಡಿಕೆವಲೆ, ತಟ್ಟಿವಲೆ, ಹಾಸುವಲೆ, ಬೀಸುವಲೆ, ಕೊಡತಿವಲೆ, ಕೋಲುವಲೆಗಳು. ತಳ್ಳಿವಲೆ, ಬಳ್ಳಿವಲೆ, ತೊಡಕುವಲೆ, ತೋರುವಲೆ, ತೊಟ್ಟಿವಲೆ, ಗೂಟವಲೆ, ಕಣ್ಣಿವಲೆ, ಕಾಲುವಲೆಗಳು. ಸಿಡಿವವಲೆ, ಸಿಲುಕುವಲೆ, ಹಾರುವಲೆ, ಜಾರುವಲೆ, ಬಡಿಗೆವಲೆ, ಚಾಚುವಲೆಗಳು. ಗಾಢವಲೆ, ಗೂಢವಲೆ, ಮಡಿಕೆವಲೆ, ಮಂದಸಿನ ವಲೆಗಳು. ಒಂದೊಂದು ಬಲೆಯು ಅವರ ವಿವಿಧ ಮೃಗ ಬೇಟೆಗೆ ರೂಪುಗೊಂಡ ಚತುರ, ಧೀರ ಬೇಟೆಗಾರರ ಕಲಾನಿಧಿಯಂತಿದ್ದವು.

ಅವರು ತಮ್ಮ ಜೊತೆಗೆ ತಡಿಕೆ, ಗಳ, ಗಾಣ, ಕೂಳಿ, ಬಿಲ್ಲು, ಬಾಣ, ಸುರಗಿ, ಕೊಡಲಿ, ಕರವತಿಗೆ, ಈಟಿ, ಎಕ್ಕವಡ, ಕತ್ತಿ, ಬಿಡಿಕೋಲು, ಬೋನು ಮುಂತಾದ ಆಯುಧ ಸಲಕರಣೆಗಳನ್ನು ತಂದಿದ್ದರು.

ಮೃಗಗಳನ್ನು ಆಕರ್ಷಿಸಲು ಅವುಗಳಿಗೆ ಕಾಣುವಂತೆ ಕಾಣುವ ದೀಹದ ಎತ್ತು–ತೋರೆತ್ತು; ಅದೇ ರೀತಿ ಬಳಸುವ ಜಿಂಕೆ – ದೀಹದ ಮೃಗಗಳನ್ನು ಜೊತೆಗೆ ತಂದಿದ್ದರು. ಬೇಡನಾಯಕರೆಲ್ಲರೂ ಮಹಾರಾಜನಿಗೆ ತಲೆಬಾಗಿ ವಂದಿಸುತ್ತ, 'ನಡೆಜೀಯ, ತಡವೇಕೆ? ಕಣ್ಣಿಗೆ ಹಬ್ಬವನ್ನುಂಟುಮಾಡುವ ಎಡೆಗಳನ್ನು ತೋರುವೆವು' ಎಂದು ಉತ್ಸಾಹದಿಂದ ನುಡಿದರು.

ಭೂಪಾಲ ಹರಿಶ್ಚಂದ್ರನು ಸತಿಸುತರೊಡನೆ, ಮಂತ್ರಿ ಸಹಿತ ಮಣಿಮಯ ರಥವೇರಿ ಬೇಟೆಗೆ ಹೊರಟನು. ವಂದಿ ಮಾಗಧರ ಬಿರುದಿನ ಘೋಷಣೆಗಳೊಂದಿಗೆ ಕಹಳೆಗಳು ಮೊರೆದವು. ಶಂಖಗಳು ಬೊಬ್ಬಿರಿದು ಧ್ವನಿಗೈದವು. ತಮಟೆ ಹಲಗೆಗಳು ಬಾರಿಸಿದವು. ಆ ಶಬ್ದಕ್ಕೆ ದಿಕ್ಪಾಲಕರು ತಳಮಳಗೊಂಡರು.

ಮೂರು ಅಕ್ಷೋಹಿಣಿ ಅಶ್ವಸೇನೆ, ಮೂರು ಅರ್ಬುದ ಕಾಲಾಳು ಸೇನೆಯೊಂದಿಗೆ, ಮೂರು ಅಕ್ಷೋಹಿಣಿ ಶಬರಬಲ ಬಂದು ಸೇರಿತು. ಆ ಸೈನ್ಯ ನಗರದಿಂದ ಹೊರಕ್ಕೆ ಹೊರಡುತ್ತಿರಲು ನೆಲ ಅಲುಗಾಡಿ, ದಿಕ್ಕುಗಳು ಉಬ್ಬಸವಡೆದವು. ವಾಸುಕಿಯ ಹೆಡೆ ಕೊರಳು ಅಲುಗಾಡಿ, ಕೂರ್ಮನ ಬೆನ್ನು ತಗ್ಗಿತು. ರಾಜನು ಹೇರಡವಿಯ ಖಗಮೃಗಗಳ ಮೇಲೆ ದಾಳಿಯಿಟ್ಟನು.

ಆ ಕಾಡು ಜಾಲ, ಆಲ, ನೆಲ್ಲಿ, ಕನ್ನೆಲ್ಲಿ, ಕಡವಡವ, ಹಾಲೆ, ಅಂಕೋಲೆ, ತಂಡಸೆರನ, ಅರಳಿ, ಬೇಲ, ವರುಟಾಳ, ಹಲಸೆಲವ, ನಂದಿ, ಚಂದನ, ಕಕ್ಕೆ, ಬಿಕ್ಕೆ,

ತರಿಯ, ಹೂಲಿ, ಮಾಲಿನಿ ಎಂಬ ಮರಗಳಿಂದ ಕಂಗೊಳಿಸುತ್ತಿತ್ತು. ಬನ್ನಿ, ಹೊನ್ನೆ, ಸೊಗಡಗಿಲು, ಕಿತ್ತಾಳೆ, ಹೆಬ್ಬಾಳೆ, ಔದುಂಬರ, ತುಂಬುರಿಗಳಿಗೆ ನೆಲವನೆಯಾಗಿತ್ತು. ತಡಸು, ಕೆಂದರಿ, ತೆಂಗು, ಕಂಗು, ಕೇದಗೆ, ಕದಳಿ, ನೆಲ್ಲಿ, ಚಿಲ್ಲ, ಬಿಲ್ವ, ರುದ್ರ, ತಂಡಸು, ತಪಸು, ತಾರಿ, ತಿರುಳಿ, ತಗ್ಗಿ, ತುಗ್ಗಿಲು, ಹುಣಿಸೆ, ಖರ್ಜೂರ ಮುಂತಾದ ಚೆಲುವಾದ ಮರಗಳಿಂದ ದಟ್ಟಯಿಸಿತ್ತು.

**ಇರುಳು ಲೇಪವ ಪಡೆದ ಕಾಳೋರಗನ ಮನೆಯೊ**

ಆ ಕಾಡು ಇರುಳು ಲೇಪವನ್ನು ಪಡೆದ ಕರಿಯನಾಗನ ಮನೆಯೊ, ಸಮುದ್ರದೊಳಗಿನ ಬೆಂಕಿ–ಬಡಬಾಗ್ನಿ ಕೆರಳಿ ಉಗುಳಿದ ಕಿಡಿಯೊ, ತ್ರಿಪುರವನ್ನು ಸುಟ್ಟ ಶಿವನ ಬಾಣ ಕಾರಿದ ಕಿಡಿಯೊ, ಹರಿವ ಮರಿದುಂಬಿಗಳ ದಾಳಿಯೊ ಎಂಬಂತೆ ಕಾಣಿಸುತ್ತಿತ್ತು.

ವ್ಯಾಧರು ಪ್ರಾಣಿಗಳ ಜಾಡು ಹಿಡಿಯಲು ಉಗುರು, ತುಪ್ಪಳ, ಗೊರಸು, ನೊರಜು, ನೊರೆಗೆಸರು, ಸೊಗಡುಗಳೆಂದು ಹೆಜ್ಜೆಗಳನ್ನು ಹುಡುಕುತ್ತ ಅವುಗಳಿರುವ ನೆಲೆಯನ್ನು ಶೋಧಿಸಿ ಆಕರ್ಷಣೆಯ ಬಲೆಯೊಡ್ಡಿದರು. ಹಾಗೆ ಬೇಟೆಯಾಡುವಾಗ ಗಿಡ, ಮರ, ಬೆಟ್ಟ, ಹೊಲ, ನೆಲ ದಿಕ್ಕುದೆಸೆ ಎಲ್ಲವೂ ಖಗಮೃಗಮಯವಾಯಿತು. ಅವುಗಳ ವೇದನೆಯ ನೋವು ಅರಚಾಟ, ಕಿರಿಚಾಟ, ನರಳಾಟ ಕಾಡನ್ನು ಆವರಿಸಿತು.

ಬೇಟೆಗಾರರು ನಡೆಯುತ್ತ, ಕೂಗಿ ಕರೆಯುತ್ತ, ಚಾಂಚಲ್ಯದಿಂದ ಓಡಾಡುತ್ತ, ಬೈಯ್ಯುತ್ತ ಬೊಬ್ಬಿಡುತ್ತಿದ್ದರು. ಅವರು ಬಿಲ್ಲು ಜೇವೊಡೆವ ದನಿ, ಮುರಿವ ತುರಿವ ತುಡುಕುವ ದನಿಗಳ ಜೊತೆಗೆ ತಿತ್ತಿರಿಗಾಳೆ, ಹರೆಯದ ದನಿಕೂಡಿ ಬೇಟೆಯ ಆರ್ಭಟ ಹೆಚ್ಚಾಗಿತ್ತು. ಆ ಬೇಟೆಯಲ್ಲಿ ಖಗಮೃಗಗಳ ಗರ್ಜನೆಯ ದನಿಯ ಜೊತೆ ಬೇಟೆಗಾರರ ಗುರಿಗೆ ಬಿದ್ದು ಒರಲಿ ಒದ್ದಾಡುವ ಮೂಕ ಪ್ರಾಣಿಗಳ ಕೂಗು ಅತಿ ಭಯಂಕರವಾಗಿತ್ತು. ಆ ವಿವಿಧ ದನಿಗಳಿಗೆ ಕಿವಿಯಾದ ರಾಜನು ದನಿಗಳ ಆಂತರ್ಯದ ಧ್ಯಾನಕ್ಕೆ ಒಳಗಾದನು.

ಹಿಡಿ ನವಿಲು, ಇರಿ ಹುಲಿಯನ್ನು, ಜಿಂಕೆಯ ಹಿಂಡನ್ನು ಅಟ್ಟು, ಆನೆಯನ್ನು ದರಿಗೆ ಕೆಡವು, ರೊಪ್ಪವಿಡಿದ ಹಂದಿಯನ್ನು ತಡೆ, ನಾಯನ್ನು ಬಿಟ್ಟು ಜಿಂಕೆಗೆ ಕಲ್ಲು ಬೀಸು. ಕೋಣವನ್ನು ಹೊರಹೋಗಲು ಬಿಡದೆ ಹೊಡೆ. ಮೊಲವನ್ನು ಹಿಂದಕ್ಕೋಡಿಸು. ಸಿಂಹಕ್ಕೆ ಹಲವು ಬಲೆಗಳನ್ನು ಹಾಕು. ಹಕ್ಕಿಗಳ ನಡೆಗೆಡಿಸು ಎಂಬ ಬೇಡರ ಬೊಬ್ಬೆಯಿಂದ ಅಡವಿ ಘೀಳಿಟ್ಟಿತು.

**ಗಾಳಿವರೆಯರಿದು ಹುಲಿಯ ಹಿಡಿ**

ಎರೆಯನ್ನು ಚೆಲ್ಲು. ಪ್ರಾಣಿಯ ಉಲುಹು ತಿಳಿ, ಬಲೆಗೆದರು. ಮೃಗಗಳು ಓಡಾಡುವ ಜಾಡು ಹಿಡಿದು ಹೆಜ್ಜೆ ಹಾಕು. ದೀಹವನ್ನು ಇಡು. ತೋಹಿನಲ್ಲಿ ಹೊಂಚು

ಹಾಕು. ಬೆಳ್ಳಾರವನ್ನು ಬಿಗಿ, ತಡಿಕೆಗಟ್ಟು. ದರಿಯನೆಗೆ, ಅಂಬುಹಿಡಿ, ಬೆಂಕಿಯಿಡು. ಬೇಗ ಜಿಂಕೆಯನ್ನು ಹಿಡಿ ಎಂದು ಒಬ್ಬರೊಡನೊಬ್ಬರು ಇಟ್ಟ ಬೊಬ್ಬೆ ಕಾಡನ್ನು ಹಬ್ಬಿತು.

ಬೇಡರು ಒಬ್ಬರಿಗೊಬ್ಬರು ತಮ್ಮ ಬೇಟೆಯ ಅನುಭವವನ್ನು ಹಂಚಿಕೊಳ್ಳುತ್ತಿದ್ದರು.

'ಇಗೋ.ಇಲ್ಲಿ ಜಿಂಕೆ ಜಿಗಿದು ಹೋಗಿದೆ.'

'ಹೌದು. ಹಿಂಗಾಲಿನಿಂದ ಒಗೆದ ಮಣ್ಣಿದೆ' ಎಂದು ಇಬ್ಬರು ಮಾತಾಡುತ್ತಿರಲು; ಮತ್ತೊಬ್ಬ.

'ಸೊಕ್ಕಿದ ಕಾಡುಹಂದಿಗಳು ಹೋದದ್ದಕ್ಕೆ ಅವುಗಳ ಕಟವಾಯಿಯಿಂದ ಸುರಿದ ನೊರೆಯಿದೆ.'

ಎನ್ನಲು, ಅವನ ಜೊತೆಯಾದ ಇನ್ನೊಬ್ಬ

'ಇಗೊ! ಕರಡಿ ತಣಿದಾಡಿಹೋದ ಗುರುತು' ಎಂದು ಹೇಳಿ ಸಾಗುತ್ತಿರುವಾಗ ದೂರದಲ್ಲಿ ಕಂಡವನೊಬ್ಬ,

'ಓಹ್! ಬನ್ನಿ. ಇಲ್ಲಿ ನೋಡಿ! ಹುಲಿ ಮರೆಯನ್ನು ಎಳೆದೊಯ್ದು ಬಿಸಿನೆತ್ತರಿದೆ' ಎಂದು ಹೇಳಲು ಹೆಜ್ಜೆ ಗುರುತು ಹಿಡಿದು ಎಲ್ಲರೂ ಒಟ್ಟಾಗಿ ಬೇಟೆಯ ಉತ್ಸಾಹದಲ್ಲಿ ಮುನ್ನುಗ್ಗಿದರು.

ಕೆಲವು ಚತುರ ಬೇಟೆಗಾರರು ಚಿಗುರೆಗಳನ್ನು ಮರಳುಗೊಳಿಸಲು 'ಗೋರಿ' ಎಂಬ ಹಾಡು ಹಾಡಿದರು. ಅದರ ಸೆಳೆತಕ್ಕೆ ಒಳಗಾಗಿ ಅವರ ಕೈಗೆ ಸಿಕ್ಕ ಆ ಮನೋಹರ ಮುಗ್ಧ ಜೀವಿಗಳು ನಿಷ್ಕರುಣೆಯ ಹಿಂಸೆಗೆ ಒಳಗಾದವು.

## ಹರಿಣಂಗಳಂ ಮೋದಿ ಮುರಿದಟ್ಟಿ ಕೆಡಹಿದವು ದೀಹದ ಹುಲಿಗಳು

ಬೇಡರು ಮೃಗದ ಹಕ್ಕೆಯನ್ನು ಕಂಡುಹಿಡಿದರು. ಅದಕ್ಕೆ ಮೇಗಾಳಿಯಲ್ಲಿ ತೋರೆತ್ತನ್ನು ಕಟ್ಟಿದರು. ಕಿಗ್ಗಾಳಿಯಲ್ಲಿ ಪಳಗಿಸಿದ – ದೀಹದ ಹುಲಿಯನ್ನು ಬಂಡಿಯಿಂದ ಇಳಿಸಿ, ಎತ್ತನ್ನು ತೋರಿಸಿ ತಲೆದಡವಿಟ್ಟರು. ಆ ಹುಲಿಯು ಕುಸಿದ ತಲೆ, ಹೊಂಚುಹಾಕಿದ ಶರೀರದಲ್ಲಿ – ಅಗಲಿಸಿದ ಬಾಯಿ, ಜೋಲುವ ಕಿವಿ, ಉಸುರಿಡಿದ ಮೂಗು, ಮರೆಯದೆ ರೆಪ್ಪೆಯಾಡಿಸದ ಉರಿಗಣ್ಣಿನದಾಗಿತ್ತು. ಅದು ಹೊಟ್ಟೆಯಲ್ಲಿ ಅಡಗಿದ ಬೆನ್ನು, ನಿಮಿರಿದ ಕೊರಳಿನಿಂದ ಆತುರವಾಗಿ ನುಗ್ಗಿತು. ಮುಂದಡಿಯಿಂದ ನೆಲವನ್ನು ಒದೆದು, ಪುಟನೆಗೆದು ಗರ್ಜಿಸುತ್ತ – ಹೆದರಿ ಕಂಗೆಟ್ಟು ಕೊರಗುತ್ತ ನೆಗೆದು ಹಾರುವ ಹರಿಣಗಳನ್ನು – ಕುಟ್ಟಿ ಕೆಡಹಿತು.

ರಾಜ ಹರಿಶ್ಚಂದ್ರನು ಹುಲಿ ಸಿಂಹಾದಿ ಕ್ರೂರ ಮೃಗಗಳನ್ನು ಬೇಟೆಯಾಡುತ್ತ ಬರುವಾಗ ಬೇಡರ ಪಡೆಯ ಕಲಿಗಳಲ್ಲಿ ಆನೆ ಸೀಳಿದ, ಕೋಣನು ಬಡಿದ, ಹಂದಿ

ಜಗ್ಗಿದ, ಸಿಂಹ ಬಗಿದ, ಹುಲಿ ಕಡಿದವರನ್ನು ಕಂಡನು. ಕರಡಿಯ ಹಿಂಸೆಗೆ ಒಳಗಾದ, ಕಡವೆ ಜಿಂಕೆ ತುಳಿದ; ಸಾರಂಗವು ಇರಿದ; ಚಿತ್ರಕ, ಎಯ್ಯೆಚ್ಚ, ಖಡ್ಗಿ ಎಂಬ ಪ್ರಾಣಿಗಳು ಅಗಿದ; ಮರೆ ಕುತ್ತಿದ ಶಬರರನ್ನು ನೋಡಿದನು. ವೇದನೆಗೆ ಬಾಯ್ಬಿಟ್ಟು ನರಳುವ, ಒರಲುವ ಅವರನ್ನು ಮರದ ತಣ್ಣೆಳಲಿನಲ್ಲಿ ಮಲಗಿಸಿಕೊಂಡು ಶುಶ್ರೂಷೆಗೆ ಸಾಗಿಸುವ ಶಬರಿಯರನ್ನು ಕಂಡು ರಾಜನು ಮಮ್ಮಲ ಮರುಗಿದನು.

ಅಲ್ಲೊಂದುಕಡೆ ನವಿಲುಗರಿಗಳ ಉಡುಗೆಯುಟ್ಟು, ತಳಿರನ್ನು ಎದೆಯ ಮೇಲುದವಾಗಿ ಹೊದ್ದು, ಗುಲಗಂಜಿಯ ಆಭರಣವನ್ನು ತೊಟ್ಟು ಕೇದಗೆ ಹೂವಿನ ಎಸಳನ್ನು ಓಲೆಯಾಗಿ ಧರಿಸಿದ್ದ ಪುಳಿಂದಿಯರಿದ್ದರು. ಅವರು ಒರಲು ಕಲ್ಲಿನಲ್ಲಿ ದಂತದ ಒನಕೆಯಿಂದ ಬಿದಿರಕ್ಕಿಯನ್ನು ಕುಟ್ಟುತ್ತ ಹಾಡುತ್ತಿದ್ದರು.

ಸುವ್ವಿ ನಲ್ಲನೆ ಸುವ್ವಿ ಸುವ್ವಿ ಕಾನನ ವಿಜಯ.

ಸುವ್ವಿ ಬಲು ಬಿಲುಗಯ್ಯ ಸುವ್ವಿ ಮೃಗಕುಲಮಥನ ಸುವ್ವಿ.

**ಮದಮೃಗದ ಮಾಂಸಮಂ ಹದದೊಳಟ್ಟು**

ಅವರು ಬಿದಿರಕ್ಕಿಯನ್ನು ಕುದಿಸಿ, ಮದಮೃಗದ ಮಾಂಸವನ್ನು ಹದದಲ್ಲಿ ಬೇಯಿಸಿ, ಮಸಾಲೆಯನ್ನು ಹಾಕಿ, ತುದಿವೆರಳಿಂದ ಉಪ್ಪನ್ನು ಉದುರಿಸಿ ರುಚಿಯಾದ ಅಡುಗೆ ಮಾಡಿದರು. ಬೇಡರ ತಂಡವು ಓರಣವಾಗಿ ಕುಳಿತು ತೃಪ್ತಿಯಿಂದ ಉಂಡು ತಾಂಬೂಲವನ್ನು ಸವಿದರು. ಅವರ ಆ ಆನಂದವನ್ನು ಕಂಡು ರಾಜನು ಸುಖಭಾವದಲ್ಲಿ ಮಿಂದನು.

ಅಲ್ಲೊಂದು ಕಡೆ ಕರ್ಕಶ ಕಿರಾತರು ಮುಂದೆ ನಡೆಯುತ್ತಿರಲು; ಬೆದರಿ ಹೋಗುವ ಜಿಂಕೆಗಳತ್ತ ಬಾಣ ಬೀಸುವ ಬೇಡತಿಯರನ್ನು ಕಂಡು ಭೂಪಾಲ ಮೆಚ್ಚಿ ಕಣ್ಣರಳಿಸಿದನು.

ಮಿರಿ ಮಿರಿ ಮಿಂಚುವ ಮೈಯಿಂದ, ಗುರು ಗುರಿಸಿ ನೋಡುತ್ತ – ಹೊಕ್ಕುಳು ಅಲ್ಲಾಡಲು ಬೆದೆ ಬಂದು ಮೂಗಿನಿಂದ ಎಮ್ಮೆಗಳ ಬಾಲಕ್ಕೆ ಮುಸುಡಿಯಿಕ್ಕಿ ತಿವಿಯುವ ಕೋಣನನ್ನು ಕಂಡು–ಬೇಡತಿಯರು ಬೊಬ್ಬಿಕ್ಕಿದರು. ಆ ಕೋಣ ಇದ್ದಕ್ಕಿದ್ದ ಹಾಗೆ ಹಿಂಡು ಬಿಟ್ಟು ಕಾಡಿಗೆ ನುಗ್ಗಲು ಬೇಡತಿಯರು ಏನೋ ಉತ್ಸಾಹಗೊಂಡು ಬಿಲ್ಲುಗಳಿಗೆ ಬಾಣ ಹೂಡಿ ಅದನ್ನು ಹೊಡೆದರು! ಹೊಕ್ಕ ಬಾಣದಿಂದ ಆ ಕೋಣವು ಮುಳ್ಳು ಹಂದಿಯಂತೆ ಕಾಣುತ್ತಿತ್ತು! ಅದನ್ನು ಕಂಡು ರಾಜನು ಬೆರಗುಗೊಂಡನು!

ಬೇಡರ ಗುಂಪು ರಹಸ್ಯವಾಗಿ ಲಾವುಗೆ, ಹರಡೆ, ಗೌಜು, ಟಿಟ್ಟಿಭ, ಕೋಗಿಲೆ, ತುರುವೆಗಣ್ಣ, ಹಂಸೆ, ರಾಗಧರ ಎಂಬ ಪಕ್ಷಿಗಳಂತೆ ತಮ್ಮ ಕೊರಲಿನಿಂದ ಶಬ್ದ ಹೊಮ್ಮಿಸಿ ಗಹಗಹಿಕೆಯಲ್ಲಿ ಕೂಗುತ್ತಿದ್ದರು. ಆ ದನಿಗೆ ಆಕಾಶದಲ್ಲಿ ಸಂಚರಿಸುವ ಪಕ್ಷಿ ಸಂಕುಲವು ಗುಂಪಾಗಿ ಪತನಗೊಳ್ಳಲು – ಅವರ ಜಾಲದತ್ತ ಹಾರಿ ಬಂದು ಸಿಲುಕಿ ಕೊಳ್ಳುತ್ತಿದ್ದವು. ಹಾರಿ ನೆಗೆದುಬಂದ ಸುಂದರ, ಮನೋಹರ, ಹಲವು

ಬಣ್ಣದ ಮುಗ್ಧ ವಿಹಗಗಳು ಅವರ ಹೊಡೆತಕ್ಕೆ ಇಳೆಗೆ ಉರುಳುತ್ತಿರುವುದು – ಹಕ್ಕಿಗಳ ಮಳೆಗರದಂತಾಯಿತು! ಅದರಲ್ಲಿ 'ಸಾಳುವ' ಎಂಬ ಬೇಟೆಗಾಗಿ ಪಳಗಿಸಿದ ಒಂದು ಬಗೆಯ ಹಕ್ಕಿಯ ಬೇಟೆಯನ್ನು ಕಂಡು ರಾಜನು ಮೂಗಿನ ಮೇಲೆ ಬೆರಳಿಟ್ಟುಕೊಂಡನು!

**ಮದ್ದುಗಳ ಮಸಕದಿಂದಂ ನದಿನದಾಳಿಯೊಳು ಮೀನ್ಗಳಂ ತವಿಸುತಿಹ ಬೇಡರು**

ಇರಿಗೂಳಿ, ಹೆಗ್ಗೂಳಿ, ಕಿರಿಗೂಳಿ ಎಂಬ ಮೀನು ಹಿಡಿಯಲು ಬಳಸುವ ಮೂರು ತರಹದ ಕುಕ್ಕೆಯಗಾಳ ಮತ್ತು ಇತರ ವಿವಿಧ ಬಲೆಗಳ ಜೊತೆಗೆ ಬೇಡರು ಮೀನನ್ನು ಹಿಡಿಯುತ್ತಿದ್ದರು. ಅವರು ಮೀನುಗಳಿಗೆ ರುಚಿಕರವಾದ ಸೊಗಡು ಕೂಳುಗಳಿಂದ – ಆಹಾರದೊಡನೆ ಬೆರೆಸಿಕೊಡುವ ಒಂದು ಬಗೆಯ ಮಂದ ವಿಷವಾದ ಮದ್ದುಗಳ ಮಸಕದಿಂದ–ನದಿ ನದಗಳ ಮೀನು ಹಿಡಿಯುವ ವಿಶಿಷ್ಟ ರೀತಿಯನ್ನು ರಾಜನು ಕಂಡನು.

ಅವರು ಅವುಗಳನ್ನು ಹಿಡಿಯುವಾಗ ಹೇಳಿದ ಬಗೆ ಬಗೆಯ ಹೆಸರಿಗೆ ಕಿವಿಗೊಟ್ಟನು.

ಕೊರೆವ, ಸೀಗುಡಿ, ಗೆಂಡೆ, ಕುಚ್ಚು, ಹಣ್ಣಲು, ಬಸಿಗ, ಗಿರಿಲು, ಬಂಗಡೆ, ಹಾವು, ಜಳಬಾಳೆ, ಕುಕಿಲು ಮೀನುಗಳು. ಹೆಗ್ಗರಿ, ಗಣೆ, ಮಣಿಗಣ್ಣ, ತೂತು, ತೆಂತಲು, ಸಿಸಿಲು, ಬೊಂಪು, ಸವಿವಾಯ, ಗೊದಳೆ, ಗರಿಮೆರೆವ, ಕಾಗೆಂಡೆಯ, ಅಯ್ಯರಗ, ದೊಂಡಿ ಮೀನುಗಳು. ಕೆಂಗರಿ, ಹರಳು, ಹಾರುವ, ಹಿರಿಯ, ಷಡುಸಕ್ಕರಿಗ, ನೀರಿಲು, ಹಂದೆಗ, ನಾನೆಮೊಗ ಮೀನುಗಳು. ಬಿಳಿಚ, ಚಿಪ್ಪಲು, ಮಲಗು, ಹೆಮ್ಮಲಗು, ಬಿಳಿಯಾನೆ, ಮಳಲಿ, ಕೂಡಿಲು, ಚಕ್ರಗೆಂಡೆ ಮೀನುಗಳು. ಆವೆಗ, ನವಿಲು, ಇಳಿಯಂಬು, ಕುರಿದಲೆಗ, ಹೆಮ್ಮೀನು, ಕೆಮ್ಮೀನುಗಳು. ಮುಕ್ಕಣ್ಣನಾರೆ, ನಿರಿಲು, ಕುಳಿಚು, ಸೂಜಿಗ, ನಗಲು, ಹೆಲ್ಲರಂ, ಬಂಕುರುಂ, ಹಳಲೆ, ಕಪ್ಪೆಗಲೊರಲೆ, ಬೋಟೆ, ಗಿರಿಲು ಮೀನುಗಳು.

ಆ ಮೀನುಗಳ ವಿವಿಧ ರಚನಾ ವೈವಿಧ್ಯ, ಬಣ್ಣ ಬೆಡಗು, ಗುಣ ಲಕ್ಷಣಗಳನ್ನು ತಿಳಿದು ಪರಂಪರಾಗತವಾಗಿ ಈ ನೆಲದ ಜನ ಜಲಚರ ಮೀನಿಗೆ ನೀಡಿದ ಅರ್ಥವತ್ತಾದ, ನುಡಿ ಜಾಣ್ಮೆಯ ಹೆಸರುಗಳನ್ನು ರಾಜ ಕೇಳಿ ಬೆರಗಾದನು.

**ರಾಜನ ಕಣ್ಣಂಚಿನಲ್ಲಿ ಕಂಬನಿ**

ಮೃತ್ಯುವು ಅಗಿದು ಉಳಿದಂತೆ; ಬೇಡರ ಹಿಂಸೆಯಲ್ಲಿ ಬದುಕುಳಿದು, ಪೊದೆಯಲ್ಲಿ ಅಡಗಿದ್ದು ಬಳಿಕ ಎದ್ದು ತಮ್ಮ ತಮ್ಮ ತಾಯಿಯರನ್ನು ಅರಸುತ್ತ ಮೃಗ ಶಿಶುಗಳು ಬಾಯಿಬಿಡುತ್ತಿದ್ದವು. ಒಂದು ಬಾಣಂತಿ ಜಿಂಕೆಯು ತನ್ನ ಕಿರುಮರಿ ಕಾಣದಾಗಲು ಕೂಗಿಕೊಳ್ಳುತ್ತ, ಗುರುಗುಟ್ಟಿ ನೋಡುತ್ತ, ಕೊರಳೆತ್ತಿ ಹೂಂಕರಿಸಿ, ಗಿಡ ಗಿಡಗಳಲ್ಲಿ ಹೊಕ್ಕು ಬಳಲುತ್ತ ಬರುತ್ತಿತ್ತು. ಅದನ್ನು ನೋಡಿದ ರಾಜನ ಕಣ್ಣಂಚಿನಲ್ಲಿ ಕಂಬನಿ ಮಿಡಿಯಿತು.

# ಪಂಪಾಕ್ಷೇತ್ರದಲ್ಲಿ ಪರಾಶರ ಮುನಿಗಳು

ರಾಜನು ಗೋರಿ ಬೇಟೆ, ಪಳಹರ ಬೇಟೆ, ತೋಹಿನ ಬೇಟೆ, ಘನಸೋಹು ಬೇಟೆ ಮುಂತಾದ ಇಪ್ಪತ್ತೆಂಟು ತರದ ಬೇಟೆಯಾಡಿ ಕ್ರೂರಮೃಗಗಳನ್ನು ಸಂಹರಿಸಿದನು. ಹಾಗೆ ಬೇಟೆಯಾಡುತ್ತ ಗೌತಮಾರಣ್ಯ, ದಂಡಕಾರಣ್ಯ, ಕ್ರೌಂಚಕಾರಣ್ಯ, ಭಯ ಗುಹಾರಣ್ಯವೆಂಬ ವಿವಿಧ ಅರಣ್ಯಗಳನ್ನು ಹೊಕ್ಕು ಬೇಟೆಯಾಡಿ ಕಿಷ್ಕಿಂದಾಚಲಕ್ಕೆ ಬಂದನು. ಅಲ್ಲಿ ವಾನರ ಮುಖ್ಯಸ್ಥರು ಬಂದು ಕಾಣಿಕೆಗಳನ್ನು ನೀಡಿದರು. ಅದನ್ನು ಸ್ವೀಕರಿಸಿದ ಹರಿಶ್ಚಂದ್ರ ಮಹಾರಾಜನು ಸಂತೋಷ ಚಿತ್ತದಿಂದಿರಲು ಬೇಡರು ಬಂದು ಹೇಳಿದರು,

'ಪ್ರಭುವೇ, ದೀಹದ ಹಲವು ಶರಭ, ಶಾರ್ದೂಲ, ಸಿಂಹಗಳನ್ನು ಬಿಚ್ಚಿ ಮೃಗ ಜಾಲವನ್ನು ತೋರಿಸಿ ತಲೆದಡವಿ ಬಿಟ್ಟೆವು.'

'ಭೇಷ್, ನಿಮ್ಮ ಹಾಗೂ ದೀಹದ ಪ್ರಾಣಿಗಳ ಇನ್ನೂ ಪುಟಿವ ಚೈತನ್ಯಕ್ಕೆ ನನಗೆ ಹೆಮ್ಮೆಯಾಗಿದೆ.'

'ಸ್ವಾಮಿ, ಹಾಗಲ್ಲ!'

'ಆ್ಞ, ಅಂದರೆ?'

'ಉಕ್ಕಿನ ಜಿಂಕೆಯಾದರೂ ಅದನ್ನು ಮುರಿವ ಹುಲಿಗಳು ಇಲ್ಲಿಯ ಜಿಂಕೆಗಳನ್ನು ಕಂಡು ಸೊಕ್ಕು ಅಡಗಿದಂತಾಗಿವೆ.'

'ಇದೇನು ಆಶ್ಚರ್ಯ!'

'ಅಷ್ಟೆ ಅಲ್ಲಾ ಮಹಾರಾಜ! ಆನೆಗಳನ್ನು ಸೀಳುವ ಸಿಂಹಗಳು ಹೆದರಿ ಹಿಂಜರಿಯುತ್ತಿವೆ!'

'ಓಹ್! ಇದೊಂದು ವಿಚಿತ್ರವೇ ಸರಿ!'

'ಹೌದು ನನ್ನೊಡೆಯ. ಉರಿ ಶೈತ್ಯವಾದಂತೆ, ವಿಷವು ಅಮೃತವಾದಂತೆ, ಸೂರ್ಯ ತಂಪಾದಂತೆ ನಮ್ಮ ದೀಹದ ಮೃಗಗಳು ಮರಗಟ್ಟಿವೆ!'

'ಈ ಕಾನನವು ವಿಚಿತ್ರವಾಗಿದೆ' ಎಂದು ಮನಸ್ಸಿನಲ್ಲಿ ಅಂದುಕೊಂಡ ರಾಜನು ಪ್ರಕಟವಾಗಿ, 'ಧೈರ್ಯಗೆಡಬೇಡಿ. ಇದೊಂದು ಮಹಾಕ್ಷೇತ್ರವಿರಬೇಕು. ಪರಿಶೀಲಿಸೋಣ' ಎಂದು ಹೇಳಿ ಅವರ ಜೊತೆ ಮುನ್ನಡೆದನು.

**ನವಿಲು ನಾಗಂಗಳಡಸಿ ನಿಜವೈರಮಂ ಮರೆದಿಪ್ಪುವು**

ರಾಜನಿಗೆ ಅಲ್ಲಿ ಹುಲಿಚರ್ಮಾಂಬರವನ್ನುಟ್ಟು, ವಿಭೂತಿಯನ್ನು ಧರಿಸಿದ ಜಟಾಧಾರಿ ಮುನಿನಾಥನು ಕಂಡನು. ಆತನು ಇತರ ಋಷಿಗಳ ಮಧ್ಯದಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಿದ್ದು, ಯಜ್ಞ ವಿಷಯವಾಗಿ ಅವರೊಡನೆ ಸಮಾಲೋಚಿಸುತ್ತಿದ್ದನು. ಆ ಪ್ರದೇಶವು ತಿಳಿಕೊಳಗಳಿಂದ ಕೂಡಿ, ಎಳಲತೆಯ ತಂಪು ಕಂಪು ಶೋಭಿಸುವ ಕುಸುಮಗಳು, ನವ್ಯ ಫಲಗಳ ಗಿಡಮರಗಳಿಂದ ಕಂಗೊಳಿಸುತ್ತಿತ್ತು. ಅಲ್ಲಿ ಅತಿಹಿಮ, ಅತಿಬಿಸಿಲು, ಅತಿಗಾಳಿ ಇರಲಿಲ್ಲ. ಆ ಮುನಿಯ ಮಹಿಮೆಯಿಂದ ಅಲ್ಲಿ ಹುಲಿ ಹುಲ್ಲೆ, ಸಿಂಹ ಆನೆ, ನವಿಲು ನಾಗರಗಳು ಜಾತಿ ವೈರ ಮರೆತು ಜೊತೆಯಲ್ಲಿ ಆಡುತ್ತಿದ್ದವು. ಆ ಪವಿತ್ರ ನೆಲೆಯಲ್ಲಿ ಆ ಮುನಿಯು ಸಾಕ್ಷಾತ್ ಪರಮೇಶ್ವರನಂತೆ ಶೋಭಿಸುತ್ತಿದ್ದನು.

ತೇಜಸ್ವಿ ಮುನಿಯನ್ನು ನೋಡುತ್ತ ರಾಜನಿಗೆ ಪುಳಕವುಂಟಾಗಿ, ಆನಂದಾಶ್ರು ಹೊಮ್ಮಿತು. ಅವರಿಗೆ ವಂದಿಸುತ್ತ ಬಿನ್ನವಿಸಿದನು,

'ಪೂಜ್ಯರೇ, ನಾನು ಎಂದಿನಂತೆ ಇಂದು ಬೇಟೆಗೆ ಬಂದೆನು. ನಮ್ಮ ಮೃಗಗಳು ಅಡವಿಯ ಮೃಗಗಳಲ್ಲಿ ಒಂದನ್ನು ಕೊಂದಿಕ್ಕದಂತೆ ಸುಮ್ಮನಿವೆ! ಅಷ್ಟೆ ಅಲ್ಲ, ಹಿಂದೆ ಸರಿದು ಬರುತ್ತಿವೆ. ಇದಕ್ಕೆ ಕಾರಣವೇನು?'

'ರಾಜನ್, ಇದು ಜಗದ್ಗುರು ವಿರೂಪಾಕ್ಷನು ನೆಲೆಸಿರುವ ಪಂಪಾಕ್ಷೇತ್ರ' ಎಂದು ಮುನಿಗಳು ನುಡಿದರು.

ಆಗ ರಾಜನಿಗೆ ಆ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಂತೆ ತನ್ನಲ್ಲಿ ಉಂಟಾದ ಸಾತ್ವಿಕಭಾವ ಮರುಕಳಿಸಿತು. ತಲೆಬಾಗಿ ವಂದಿಸುತ್ತ ಅವರ ನುಡಿಗೆ ತನ್ನ ಇಡೀ ಮೈಯನ್ನು ಕಿವಿಯಾಗಿಸಿದ. ಮುನಿಗಳು ಮಾತು ಮುಂದುವರಿಸಿ,

'ಇಲ್ಲಿ ವೇದಗಳ ಉದ್ಘೋಷವೂ, ಉಪನಿಷತ್ತುಗಳ ಪಹರೆಯೂ ಇದೆ. ಇದು ಅಣಿಮಾಸಿದ್ಧಿಗಳ ಆಕರ. ಇಲ್ಲಿ ಧರ್ಮಪುರುಷನು ವಾಸವಾಗಿದ್ದಾನೆ. ಹರಿಬ್ರಹ್ಮಾದಿ ದೇವತೆಗಳು ಈ ಕ್ಷೇತ್ರವನ್ನು ಕಾಯುತ್ತಿದ್ದಾರೆ. ಇದು ಚತುರ್ವಿಧ ಪುರುಷಾರ್ಥಗಳ ಬೀಡು. ಪುಣ್ಯದ ಪುಂಜವಾದ ಈ ಕ್ಷೇತ್ರ ಲಕ್ಷ್ಮೀ ಸರಸ್ವತಿಯರ ಕ್ರೀಡಾಸ್ಥಳವಾಗಿ ಶೋಭಿಸುತ್ತಿದೆ.'

'ಮುನಿಶ್ರೇಷ್ಠರೆ, ತಮ್ಮ ಎಡೆಗೆ ಬಂದು ನಾನು ಧನ್ಯನಾದೆ.'

'ರಾಜಶ್ರೇಷ್ಠನೆ, ಪವಿತ್ರ ಹೇಮಕೂಟ, ಮತಂಗಾದ್ರಿ ಮತ್ತು ಮಾಲ್ಯವಂತ ಪರ್ವತಗಳನ್ನು ನೋಡು. ಈ ಪಂಪಾಕ್ಷೇತ್ರಕ್ಕೆ ನಾಲ್ಕು ಬಾಗಿಲುಗಳಂತೆ ಪೂರ್ವಕ್ಕೆ ಕಿನ್ನರೇಶ, ದಕ್ಷಿಣಕ್ಕೆ ಜಂಬುಕೇಶ, ಪಶ್ಚಿಮಕ್ಕೆ ಸೋಮನಾಥ, ಉತ್ತರಕ್ಕೆ ವಾಣಿಭದ್ರ ಪರ್ವತಗಳಿವೆ. ಗುರು ವಿರೂಪಾಕ್ಷನ ಆಜ್ಞೆಯಂತೆ ಇಲ್ಲಿ ಯಮದೂತರೂ ಸೇರಿದಂತೆ ಯಾರೂ ಮುನಿಯಬಾರದು.'

'ಓಹ್, ಈ ಕ್ಷೇತ್ರದ ಗಾಳಿ ಸೋಂಕಿದೊಡನೆ ಶಾಂತಿಯು ಸಕಲ ಜೀವಗಳ ಉಸಿರಾಗುವುದು. ನಾನು ನನ್ನವರು ಪಾವನವಾದೆವು.'

**ದುರಿತವನರುಹಿಸುಡುವ ಕಿಚ್ಚೆಂದೆನಿಪ ತುಂಗಭದ್ರಾ ನದಿ**

'ರಾಜನೇ, ಇಲ್ಲಿ ಹರಿಯುವ ಪಾವನ ನದಿ ತುಂಗಭದ್ರೆಯನ್ನು ನೋಡು. ಇದರ ದರ್ಶನ ಮಾತ್ರದಿಂದಲೇ ಜೀವರ ಪ್ರಾಪಂಚಿಕ ವ್ಯವಹಾರದ ಹುಟ್ಟು ನಾಶವಾಗುವುದು. ಇದು ಸಮಸ್ತರೋಗಗಳನ್ನು ಇಲ್ಲವಾಗಿಸುವ ಅಲಗು, ಅಜ್ಞಾನದ ನಡುದಲೆಗೆ ಗರಗಸ, ಮಾಯೆಯ ಬಸುರನ್ನು ತಿವಿಯುವ ಶೂಲ, ಎಲ್ಲ ಪಾತಕಗಳನ್ನು ಸುಡುವ ಬೆಂಕಿ.'

'ಯತಿವರ್ಯರೇ, ಈ ಕ್ಷೇತ್ರದ ಪಾವಿತ್ರ್ಯವನ್ನು ತಿಳಿಸಿ ನನ್ನ ಸಂಶಯವನ್ನೆಲ್ಲ ದೂರ ಮಾಡಿದಿರಿ. ನಿಮ್ಮನ್ನು ಪಡೆದ ಪುಣ್ಯಾತ್ಮ ತಂದೆಯ ಹೆಸರೇನು?'

'ರಾಜನೇ, ಎರಡನೆ ಶಿವ ಎನಿಸುವ ವಸಿಷ್ಠಮುನಿಯ ಮೊಮ್ಮಗ ನಾನು. ನನ್ನ ಹೆಸರು ಪರಾಶರ.'

ವಸಿಷ್ಠರ ನುಡಿ ಕೇಳುತ್ತಿದ್ದಂತೆ ಹರ್ಷಚಿತ್ತನಾದ ಹರಿಶ್ಚಂದ್ರನು ಭಕ್ತಿ ಪರವಶನಾಗಿ,

'ನಮ್ಮ ಪೂಜ್ಯ ಗುರುಗಳ ಅಡಿಗಳ ಕಡೆಗೆ ಬಂದೆ' ಎಂದು ಹೇಳುತ್ತ ಬಳಿಸಾರಿ ನಡೆದನು.

ತಿಳಿಗೊಳದ ದಡದಲ್ಲಿ ಬೆಳೆದ ಎಳೆಮಾವುಗಳ ಕೆಳಗೆ, ಮಲ್ಲಿಕಾ ಮಂಟಪದ ತಣ್ಣೆಳಲಿನ, ಮರಳದಿಣ್ಣೆಯ ಅಶೋಕ ತರುವಿನ ಚಿಗುರ ಗೊಂಚಲುಗಳ ಮೇಲೆ ಕುಳಿತು ಋಷಿಗಳ ಓಲಗ ನಡೆಸುತ್ತಿದ್ದ ಪರಾಶರಮುನಿಯು ರಾಜನಿಗೆ ಪಶುಪತಿಯಂತೆ ಕಂಡನು.

'ಜಯ ಜಯ ದಯಾಭರಣ. ಜಯ ಜಯ ಕೃಪಾವರಣ. ಜಯ ಶಾಂತಿಕಿರಣ. ತಮ್ಮ ಅಡಿದಾವರೆಗೆ ಬಂದು ಪಾವನನಾದೆನು. ಶರಣು' ಎಂದು ಸಾಷ್ಟಾಂಗ ಪ್ರಣಾಮ ಮಾಡಿದನು.

ಆನಂದ ತುಂದಿಲನಾದ ಹರಿಶ್ಚಂದ್ರನ ಕಣ್ಣಿನಲ್ಲಿ ಸುಖಜಲ ಒಸರಿತು. ಮೈಯು ಪುಳಕಗೊಂಡಿತು. ಕೆನ್ನೆಯು ಬೆವರಿ ಮುಖದಲ್ಲಿ ನಸುನಗೆ ಪ್ರಕಾಶಿಸಿತು. ಪರಾಶರಮುನಿಗಳು ಭೂರಮಣ ಹರಿಶ್ಚಂದ್ರನನ್ನು ಮೈದಡವಿ ಸಮಾಧಾನಪಡಿಸುತ್ತ ಪ್ರಶ್ನಿಸಿದರು,

'ಎಲೆ ಮಗನೆ, ನೀ ಎತ್ತ? ಈ ಕಾಡು ಎತ್ತ? ಈ ಬನಕ್ಕೆ ಯಾವ ಕಾರಣಕ್ಕೆ ಬಂದೆ?'

ಅದಕ್ಕೆ ಉತ್ತರವಾಗಿ ರಾಜನು ಹೇಳಿದನು,

'ಪೂಜ್ಯರೇ, ನನ್ನ ರಾಜ್ಯದಲ್ಲಿ ಖಗಮೃಗದ ಕಾಟ ಹೆಚ್ಚಾಯಿತು. ಜನ ಹಾನಿಗೆ ಒಳಗಾದರು. ಸೈರಿಸಲಾರದೆ ಮೊರೆಯಿಟ್ಟರು. ಹಾಗಾಗಿ ಬೇಟೆಗೆ ಬಂದೆನು.'

ತ್ರಿಕಾಲಜ್ಞಾನಿಗಳಾದ ಮುನಿಶ್ರೇಷ್ಠರು ಅರಸನ ಮೇಲೆ ಕೌಶಿಕನ ಕಾಟ ಅಡಿಯಿಟ್ಟಿರುವುದನ್ನು ತಿಳಿದರು. ವಿಷಮ ವಿಶ್ವಾಮಿತ್ರ ಮುನಿದು ತಪ್ಪು ಸಾಧಿಸುತ್ತಿರುವನು, ಅದನ್ನು ತಿಳಿದಿರು ಎಂದು ರಾಜನಿಗೆ ತಿಳಿಸಬೇಕೆ? ತಿಳಿಸಿದರೆ ಚಾಡಿಕೋರತನ ವಾಗುತ್ತದೆ. ತಿಳಿಸದಿದ್ದರೆ ನೃಪನಿಗೆ ಆಗುವ ಕೇಡನ್ನು ನಾನು ತಿಳಿದು, ಉಪೇಕ್ಷಿಸಿದಂತಾಗಿ ಅವನಿಗೆ ತೊಂದರೆಯಾಗುತ್ತದೆ. ಈಗೇನು ಮಾಡುವುದು – ಎಂದು ಇಕ್ಕಟ್ಟಿನ ಪ್ರಸಂಗವನ್ನು ನೆನೆದು ಚಿಂತಾಕ್ರಾಂತರಾದರು.

### ಮಗನೆ ಹೋಗದಿರು ಮರೆದು ವಿಶ್ವಾಮಿತ್ರನಾಶ್ರಮಕ್ಕೆ

ಮನೆಗೆ ಬಂದ ಶಿಷ್ಯನಿಗೆ ಕೆಟ್ಟದೆಸೆಯಿದೆ ಎಂದು ಹೇಳದೆ, ಬೇರೆ ರೀತಿ ಎಚ್ಚರಿಸುವೆ ಎಂದು ಮುನಿನಾಥನು ನಿರ್ಧರಿಸಿ,

‘ಪುತ್ರ ಹರಿಶ್ಚಂದ್ರನೇ, ನನ್ನ ಮಾತಿಗೆ ಸಮ್ಮತಿಸುವುದಾದರೆ ನೀನು ಕುಲಾಚಾರವನ್ನು ಬಿಡದೆ, ಗಳಿಸಿದ ಉತ್ತಮ ಕೀರ್ತಿಗೆ ಕುಂದಾಗದಿರುವಂತೆ ದೃಢ ನಿಶ್ಚಯ ಮನದವನಾಗಿರು. ಮುಂದೆ ವಿಶ್ವಾಮಿತ್ರನ ಆಶ್ರಮವಿದೆ. ಏನೇ ಸಂದರ್ಭ ಒದಗಿ ಬಂದರೂ ಮರೆತೂಸಹ ಆ ಆಶ್ರಮಕ್ಕೆ ಹೋಗಬೇಡ. ಮೋಸದಿಂದ ಅಲ್ಲಿಗೆ ಕೊಂಡೊಯ್ದು ಬಳಿಕ ಆ ಮುನಿಯು ನಿನ್ನನ್ನು ಕಷ್ಟಕ್ಕೆ ಸಿಲುಕಿಸಿ ಕಾಡುವನು. ಇದನ್ನು ತಿಳಿದಿರು’ ಎಂದು ಹೇಳಿ ರಾಜನನ್ನು ವಿರೂಪಾಕ್ಷನೆಡೆಗೆ ಕರೆತಂದನು.

ಕಾಂತಿಯಿಂದ ಹೊಳೆಯುವ ಮಹಾ ತುಂಗಭದ್ರೆಯಲ್ಲಿ ಇರುವ ಬಾಸುರ ತೀರ್ಥವನ್ನು ಮುನಿಯು ರಾಜನಿಗೆ ತೋರಿಸಿದನು. ಇದು ಕಾಶಿಯ ಮಣಿಕರ್ಣಿಕೆಯಷ್ಟೆ ಪವಿತ್ರವಾದದ್ದು. ಇಲ್ಲಿಯ ರುದ್ರಪದ ಸನ್ನಿಧಿಯಲ್ಲಿ ಪಿಂಡವನ್ನು ಅರ್ಪಿಸುವುದರಿಂದ ಗಯಾ ಕ್ಷೇತ್ರಕ್ಕಿಂತ ಅಧಿಕ ಫಲ ಪ್ರಾಪ್ತಿಯಾಗುವುದು ಎಂದು ಹೇಳಿದನು. ರಾಜನು ಸ್ನಾನಮಾಡಿ ತರ್ಪಣ ಪಿಂಡಾದಿ ಪಿತೃಕಾರ್ಯವನ್ನು ಸಂತೋಷದಿಂದ ನೆರವೇರಿಸಿದನು.

ಆ ಕ್ಷೇತ್ರವನ್ನು ಪರಿಚಯಿಸುತ್ತ ಮುನಿಗಳು – ಈ ಗಿರಿಯಲ್ಲಿ ಹರಿಬ್ರಹ್ಮಾದಿಗಳು ಇಂದ್ರಾದಿ ದಿಕ್ಪಾಲಕರು ತಪಸ್ಸನ್ನು ಆಚರಿಸಿರುವರು. ಅವರು ಸ್ಥಾಪಿಸಿದ ಲಿಂಗಗಳು, ಸರಸ್ಸುಗಳು ಇಲ್ಲಿವೆ. ಇದೋ ನೋಡು ಇದು ಪಾತಾಳಗಂಗೆ. ಸುರನದಿಗಂಗೆ ಹರಿದು ಬಂದ ಸ್ಥಳ. ಅದೋ ನೋಡು ಶಿವನು ತನ್ನ ಹಣೆಗಣ್ಣಿನಿಂದ ಮನ್ಮಥನನ್ನು ಸುಟ್ಟುಹಾಕಿದ ಸ್ಥಳ ಎಂದು ಹೇಳಿ ರಾಜನಿಗೆ ಪರಿಚಯಿಸಿ, ಪಂಪಾಬಿಕೆಯ ದರ್ಶನಕ್ಕೆ ಕರೆದೊಯ್ದರು.

‘ಈ ದೇವಿಯೇ ಮಹಿಷಾಸುರನನ್ನು ಕೊಂದವಳು. ಮಾರ್ಕಂಡೇಯ ಪುರಾಣದಲ್ಲಿ ರುದ್ರಶಕ್ತಿಯ ಶಿರಸ್ಸು ಎಂದು ಹೇಳಿರುವುದು ಇದನ್ನೆ. ಪಾರ್ವತಿ ಈ ಎಡೆಯಲ್ಲಿ ಪಂಪಾಂಬಿಕೆ. ಕಾಶಿಯಲ್ಲಿ ವಿಶಾಲಾಕ್ಷಿ. ಕಂಚಿಯಲ್ಲಿ ಕಾಮಾಕ್ಷಿ’ ಎಂದು ತಿಳಿಸಿ ದೇವಿಯನ್ನು ಪೂಜಿಸಿ ಅಲ್ಲಿಂದ ವಿರೂಪಾಕ್ಷನ ಸನ್ನಿಧಿಗೆ ಕರೆದೊಯ್ದರು.

ವಿರೂಪಾಕ್ಷ ಸ್ವಾಮಿಯನ್ನು ದರ್ಶನ ಮಾಡಿದ ಹರಿಶ್ಚಂದ್ರ ಮಹಾರಾಜನು 'ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದವನೇ ಕಾಪಾಡು. ಭಕ್ತ ಜನರ ದುರಿತ ವಿಧ್ವಂಸಕನೇ ಕಾಪಾಡು. ಧರ್ಮಸ್ವರೂಪ ವೃಷಭಾರೂಢನೇ ಕಾಪಾಡು. ಇಂದ್ರ ಅಗ್ನಿ ಮರುತಾದಿಗಳಿಂದ ವಂದಿತನಾದವನೇ ಕಾಪಾಡು. ಶ್ರೀ ಗುರು ವಿರೂಪಾಕ್ಷನೇ ಶರಣು. ಕಾಪಾಡು' ಎಂದು ಪ್ರಾರ್ಥಿಸಿದನು.

ಸುಗಂಧ ದ್ರವ್ಯಗಳಿಂದ, ಸುಗಂಧ ಪುಷ್ಪಗಳಿಂದ ರುದ್ರಾಭಿಶೇಕ ಮಾಡಿ ಪಂಪಾಬಿಕಾ ಪತಿಯ ಪೂಜೆ ಮಾಡಿದನು. ಸಕಲ ವಾದ್ಯರವಗಳೊಡನೆ ಧೂಪಾರತಿಯನ್ನು ಮಾಡಿ ನೈವೇದ್ಯವನ್ನು ಸಮರ್ಪಿಸಿದನು. ರತ್ನದಾರತಿ ಬೆಳಗಿದನು. ಶ್ರೀ ಪಾರ್ವತೀ ಪತಿಯ ಪ್ರೀತ್ಯರ್ಥವಾಗಿ ರಾಜನು ದ್ವಿಜರನ್ನು ಕರೆದು ಅವರ ಇಷ್ಟ ತೃಪ್ತಿಯಾಗುವಂತೆ, ಮನದಣಿಯುವಂತೆ ದಾನ ಮಾಡಿದನು.

ರಾಜ ಹರಿಶ್ಚಂದ್ರನು 'ಇಂದು ನಾನು ಕೃತಕೃತ್ಯನಾದೆ. ನಾನು ಹುಟ್ಟಿದ್ದು ಸಾರ್ಥಕವಾಯಿತು. ಬೇಟೆಯು ಸಂಸಾರ ಸಾಗರವನ್ನು ದಾಟಿಸುವ ಶ್ರೀ ಗುರು ವಿರೂಪಾಕ್ಷನನ್ನು ಕಾಣಿಸಿತು. ಬಿಟ್ಟಿ ಕೆಲಸಕ್ಕೆ ಸೇರಿ ರಾಜಧಾನಿ ಕಂಡೆ ಎಂಬ ಗಾದೆಯಂತೆ ನನಗೆ ಶ್ರೀ ವಿರೂಪಾಕ್ಷನ ದರ್ಶನವಾಯಿತು' ಎಂದು ಸಂತೋಷಪಟ್ಟನು.

ರಾಜನು ಗುರು ಪರಾಶರ ಮುನಿಗಳಿಗೆ ವಂದಿಸಿ ಆಶೀರ್ವಾದ ಪಡೆದು ಅಲ್ಲಿಂದ ಬೀಳ್ಕೊಟ್ಟನು. ರಥವೇರಿ ಮುಂದಿನ ಬೇಟೆಗಾಗಿ ಪರಿವಾರ ಸಮೇತ ಹೊರಟನು.

# ವಿಶ್ವಾಮಿತ್ರ ಸೃಷ್ಟಿಸಿದ ಮಾಯಾ ವರಾಹ

ಕೌಶಿಕ ಮುನಿಯು ಹರಿಶ್ಚಂದ್ರನನ್ನು ಹುಸಿಗೊಳಿಸುವ ನಿರ್ಧಾರದಿಂದ ಹೆಚ್ಚು ಕಾಟವನ್ನು ಕೊಡಲು ಮಾಯಾ ವರಾಹವನ್ನು ಸೃಷ್ಟಿಸಿದನು. ಅದನ್ನು ರಾಜನು ಬೇಟೆಯಾಡುವ ಸ್ಥಳಕ್ಕೆ ಕಳುಹಿಸಿದನು.

ಭೂರಮಣ ಹರಿಶ್ಚಂದ್ರನಿಗಿಂತ ಮುಂದೆ ಬೇಡರ ಪಡೆ ಸಾಗಿತು. ಮೃಗಗಳ ಹೆಜ್ಜೆ ಗುರುತು ಹಿಡಿದು ಬಲೆ ಹರಡುತ್ತ, ಅವುಗಳ ಸಪ್ಪಳವನ್ನು ಆಲಿಸುತ್ತ ಪೊದೆಯನ್ನು ಶೋಧಿಸುತ್ತ ಅವರು ನಡೆದರು. ಜಾಡುಹಿಡಿದು ತೋಹವನ್ನು ಕಟ್ಟುವ, ಆನೆ ಬೀಳಿಸಲು ಖೆಡ್ಡ ತೋಡುವ ಭುಜಬಲರಾದ ಅವರು ಸೊಕ್ಕಿದ ಹಂದಿಯೊಂದು ತಮ್ಮ ಮುಂದೆ ಓಡಿದುದನ್ನು ಕಂಡರು. ದೊಡ್ಡ ಈಟಿಗಳನ್ನು ಹಿಡಿದು ಬೊಬ್ಬಿರಿದು ಗಟ್ಟಿಯಾಗಿ ಕೂಗುತ್ತ ಅದರತ್ತ ನುಗ್ಗಿದರು.

**ಹೆಬ್ಬಂದಿ ವಿಪಿನದೊಳು ನಿಂದುದಾಶಬರರಿಗೆ ಮೃತ್ಯುತಾನೆಂಬಂದದಿ**

ಆ ಹಂದಿಯ ಕಣ್ಣು ಸಿಡಿಲ ಕಿಡಿಯಂತೆ, ದಾಡೆ ಬ್ರಹ್ಮಾಸ್ತ್ರದ ಎರಡು ತುಂಡಿನಂತೆ, ಕಿವಿ ವಜ್ರದ ಚಿಪ್ಪಿನಂತೆ, ಮುಸುಡಿ ಬಲರಾಮನ ನೇಗಿಲಂತೆ, ರೋಮಗಳು ಮೃತ್ಯುವಿನ ಕೈಯ ಬಾಣದಂತಿದ್ದವು. ಅದು ಯಮನ ಕೋಣನಂತೆ ಭಯಂಕರವಾಗಿತ್ತು. ಅದನ್ನು ಕಂಡ ಬೇಡರು ನಾಯಿಗಳನ್ನು ಛೂ ಬಿಟ್ಟರು. ಹಂದಿಯು ಅವು ಯಾವನ್ನೂ ಲೆಕ್ಕಿಸದೆ ಹಾಗೇ ನಿಂತಿತ್ತು! ಅದನ್ನು ಕಂಡು ಮುಂಚೂಣಿಯ ಬೇಡರು ಹಿಂದೆಗೆಯುತ್ತ ಹೊಡೆ, ಕುತ್ತು, ಕೊಲ್ಲು, ತಿವಿ ಎಂದು ಅರಚಾಡುತ್ತಿದ್ದರು. ಅವರನ್ನು ಕಂಡ ಅದು ಕಿಗ್ಗಣ್ಣಿಕ್ಕಿ ನಾಲ್ಕು ದಿಕ್ಕನ್ನು ನೋಡಿತು! ಸೊಕ್ಕಿನಿಂದ ಬೇಡರ ಗುಂಪಿನತ್ತ ನುಗ್ಗಿ ಅವರನ್ನು ಚದುರಿಸಿ, ಘುಡು ಘುಡಿಸಿ ಕುಡುದಾಡೆಯನ್ನು ನಿಧಾನವಾಗಿ ಮಸೆಯುತ್ತ ಮಂದಗತಿಯಿಂದ ಸಾಗಿ ಕುಳಿತುಕೊಂಡಿತು.

'ಎಲೆ ಲೆಲೆ ಲೆಲೇ ಹಂದಿಯನುವಾದುದು' ಎಂದು ಬೇಡರು ಗಾಬರಿಯಿಂದ ಅಬ್ಬರಿಸಿದರು. ಆ ಸದ್ದಿಗೆ ಹಂದಿಯು ಸೊಪ್ಪನ್ನು ಕೆದಕಿ ಬಗೆಯುತ್ತ ಮೆಲ್ಲನೆ ತೊನೆದಾಡಿ ಉಬ್ಬಿ ಪುಟ ನೆಗೆದು ಗಜರಿ ಗರ್ಜಿಸಿತು. ಉಗ್ರ ಶಬರರನ್ನು ಸುತ್ತಿ ಮೇಲಾಯ್ದು ಕಡಿದು ಕೊಚ್ಚಿ ಹಾಕಿತು. ಕಾಡು ನಡುಗುವಂತೆ ಸ್ವೇಚ್ಛೆಯಾಗಿ ಓಡಾಡಿತು. ಕೋಪದಿಂದ ಕೆರಳಿ ಘುಡು ಘುಡಿಸುತ್ತ ಬೇಡರ ಪಡೆಯ ಮೇಲೆ ನುಗ್ಗಿ ಕೋರೆಹಲ್ಲಿನಿಂದ ಅವರನ್ನು ಇರಿಯಿತು. ಮರಳಿ ತೋಡಿದ ಜಾಡಿನಲ್ಲಿ ನುಗ್ಗಿತು. ಆಗ ಬೇಡರು ಒಂದೇಸಮನೆ ಬಾಣ ಹೂಡಿದರು. 'ರಕ್ತ ಹೊಮ್ಮುವಂತೆ ಹೊಡಿ, ಬಡಿ' ಎಂದು ಕೂಗಿದರು.

ಹಳ್ಳದ ಒತ್ತಿನ ಹೊದರ ಹೊಸ ಮೆಳೆಯರೊಪ್ಪದಲ್ಲಿದ್ದ ಹಂದಿಯನ್ನು ಕಂಡು ನಾಯಿಗಳು ಸುತ್ತುವರಿದು ಬೊಗಳಿದವು. ಭಯಗೊಂಡ ಹಂದಿ ಎಡಬಲವನ್ನು ನೋಡುತ್ತ ಬಾಲವನ್ನು ಬೀಸುತ್ತ, ನಿಗುರಿದ ರೋಮಗಳಿಂದ, ಕೆದರಿ ಮೆಳ್ಳಿಸುವ ಕಣ್ಣುಗಳಿಂದ ನೋಡಿತು. ದಾಡೆಗಳಿಂದ ಕಿಡಿಯುದುರಿಸುವಂತೆ ನೆಲಗುದ್ದಿ ಹಿಂದಕ್ಕೆ ಬೇಟೆಗಾರರ ಮಧ್ಯದೊಳಕ್ಕೆ ನುಗ್ಗಿ ಉಬ್ಬುಬ್ಬಿ ಬಂದಿತು! ಅದನ್ನು ಕಂಡ ಶಬರ ನಾಯಕರು ಕೆರಳಿ ಮುನ್ನುಗ್ಗಿ 'ಕಲ್ಲಲ್ಲಿ ಹೊಡಿ, ಈಟಿಯಲ್ಲಿ ಇರಿ, ಭರ್ಜಿಯಿಂದ ಚುಚ್ಚು, ದಾಡೆಯನ್ನು ಮುರಿ' ಎಂದು ಬೊಬ್ಬಿಕ್ಕಿ ಬಾಣ ಪ್ರಯೋಗಿಸಿದರು.

ಕೆರಳಿದ ಸಿಂಹ ಆನೆಗಳನ್ನು ಕೊಲ್ಲುವಂತೆ, ಮುನಿದ ಗರುಡ ಸರ್ಪಗಳನ್ನು ಸಂಹರಿಸಿದಂತೆ ವಿಶ್ವಾಮಿತ್ರನ ಮಾಯಾ ವರಾಹವು ಬೇಡರ ಪಡೆಯನ್ನು ಕೊಂದಿತು. ಅವರನ್ನು ತುಳಿದು ಕೆಡಹಿ ಕರುಳು ಹರಿದು ತರಿದು ಹಾಕಿತು. ಅತಿ ಬಳಲಿ ಕಣ್ಣು ಕೆಂಪಾಗಲು ತೀವ್ರವಾಗಿ ಉಸಿರಾಡುತ್ತ, ಕಟವಾಯಿಯಿಂದ ನೊರೆ ಸುರಿಸುತ್ತ, ತೇಂಕುತ್ತ ಮುಸುಡಿಯಿಂದ ನೆಲ ಕೆದರುತ್ತ ಪೊದರಿನ ಕಡೆಗೆ ಹೋಯಿತು.

**'ಹು ಹು ಹು ಹುಲಿಯಲ್ಲ'**

ಅದರೊಳಗೆ ಅಡಗಿದ್ದ ಒಬ್ಬ ಬೇಡ ಅದು ಬರುವುದನ್ನು ಕಂಡು – ಕೆದರಿದ ತಲೆ, ಗಿಡಕ್ಕೆ ಸಿಕ್ಕಿ ಕಳಚಿದ ಉಡುಗೆ, ಮುಳ್ಳುನೆಟ್ಟ ಪಾದದಲ್ಲಿ ಕುಂಟುತ್ತ; ಬೆನ್ನಿಗೆ ಕಟ್ಟಿಕೊಂಡಿದ್ದ ಬುತ್ತಿ ಗಂಟು ಸಡಿಲವಾಗಿ ಜೋಲಾಡುತ್ತಿರಲು, ಒಡೆದ ಮೊಣಕಾಲಿನಿಂದ ಬೆನ್ನಬಿಗಿ ಸಡಿಲಾಗಿ ಬಾಗುತ್ತ; ಅಳ್ಳೆ ನಡುಗುತ್ತ ಭಯದಿಂದ ಕೆಟ್ಟೋಡುತ್ತಿದ್ದನು. ಅವನ ಎದುರು ಬಂದ ಓರ್ವ ಬೇಡ ಅವನನ್ನು ಅಡ್ಡಗಟ್ಟಿ ಕೇಳಿದನು;

'ಏಕೆ ಓಡುವೆ? ಏನು ಕಂಡೆ?'

'ಹು ಹು ಹು ಹುಲಿಯಲ್ಲ'

'ಮತ್ತೆ'

'ಹಂದಿ ಹಿಂಬಾಲಿಸಿ ಬರುತ್ತಿದೆ.'

'ಅದೆಲ್ಲಿ ತೋರಿಸು'

'ನೀವೇ ಹುಡುಕಿಕೊಳ್ಳಿ' ಎಂದು ಹೇಳುತ್ತ ನಿಲ್ಲದೆ ಓಡಿದನು!

ಅವನ ಕೈಕಾಲು ನಡುಗುತ್ತಿದ್ದು, ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಮೂಗಿನ ಒಳ್ಳೆ ಅರಳುತ್ತ ವೇಗವಾಗಿ ಆಡುತ್ತ ಮುಖ ಬೆವರಿ ಭಯ ಕಣ್ಣಲ್ಲಿ ನಟ್ಟಿತ್ತು. ನಿಟ್ಟೋಟದಿಂದ ಓಡಿ ಎಡವಿಬಿದ್ದು, ಮೊಣಕೈ ಕಾಲುಗಳಲ್ಲಿ ರಕ್ತ ಒಸರುತ್ತಿರಲು ಮತ್ತೆ ಅತ್ತಿತ್ತ ನೋಡದೆ ದುಡು ದುಡು ಬರುತ್ತಿದ್ದ ಬೇಡನನ್ನು ರಾಜ ನೋಡಿದನು.

ಹೆದರಿದ ಬೇಡನನ್ನು ಸಂತೈಸಿ ತಂದು ರಾಜನ ಮುಂದೆ ನಿಲ್ಲಿಸಿದ ಬೇಡರ ನಾಯಕನು 'ಹೆದರಿಕೆಗೆ ಕಾರಣವೇನು ಹೇಳು?' ಎಂದನು. ಆಗ ಅವನು ರಾಜನಿಗೆ ಕೈ ಮುಗಿಯುತ್ತ,

'ಸ್ವಾಮಿ, ಸೊಕ್ಕಿನ ಭೀಕರ ಎಕ್ಕಲವನ್ನು ನೋಡಿದೆ. ಅದು ಕಡುಗಲಿ ಹಿರಣ್ಯಾಕ್ಷನನ್ನು ಬಗಿದ ವರಾಹನೋ; ಶಿವನ ಬಲವಾದ ಹೊಡೆತಕ್ಕೆ ಮುರಿದ ಸೊಂಡಲಿನ ಗಜಾಸುರನೋ; ದುರ್ಗೆಯ ತೀವ್ರ ಹೊಡೆತದಿಂದ ಕೊಂಬು ಮುರಿದ ಮಹಿಷಾಸುರನೋ ಎಂದು ಸಂದೇಹವಾಗುತ್ತಿದೆ.'

'ಅಯ್ಯಾ, ಕೊಬ್ಬಿ ಬೆಳೆದ ಹಂದಿ ಕಾಡಿನಲ್ಲಿ ಇರುವುದಿಲ್ಲವೆ? ಗಾಬರಿಗೊಳ್ಳುವುದೇಕೆ? ಅದರಿಂದ ಬೇಡ ಪಡೆಗೆ ಆದ ಕಷ್ಟವೇನು? ನೀನು ಓಡಿ ಹೋದುದಕ್ಕೆ ಕಾರಣವೇನು?'

'ಪ್ರಭುವೇ, ಮುಂಚೂಣಿಯಲ್ಲಿದ್ದ ಸಾಹಸ ಬೇಡರಲ್ಲಿ ಒಬ್ಬರೂ ಉಳಿಯದಂತೆ ಎಲ್ಲರನ್ನೂ ಕೊಂದು, ನಾಯಿಗಳನ್ನು ಸೀಳಿಹಾಕಿದೆ. ಅದು ರಕ್ಕಸ ಹಂದಿ!'

'ಬೇಡರ ಪಡೆ ಮಡಿಯಿತೆ?'

'ಮಡಿಯಿತು'

'ನಾಯಿಗಳು ಕೂಡ ಸತ್ತವೆ?'

'ಸತ್ತವು.'

'ಆ ಹಂದಿ ಇದೆಯೊ?'

'ಇದೆ'

'ಆ ಸ್ಥಳ ಎಲ್ಲಿದೆ?'

'ಹತ್ತಿರವೇ'

'ತೋರಿಸುವೆಯಾ?'

'ತೋರಿಸುವೆ'

'ನಡೆಯಿರಿ' ಎಂದು ರಾಜನು ಹೇಳಿದನು.

ಆಗ ಬೇಡ ಪಡೆಯವರು ರಾಜನನ್ನು ರಥದಲ್ಲಿ ಕರೆದುಕೊಂಡು ಆ ಹಂದಿ ಮಲಗಿರುವ ಪೊದರಿನ ಬಳಿಗೆ ಹೋದರು.

ಬೇಡರು ಬೇಟೆ ನಾಯಿಗಳ ಬೆನ್ನುಸವರಿ, ತಲೆನೇವರಿಸಿ 'ಬೆನ್ನನ್ನು ಬಡಿಯಿರಿ. ಬಸುರ ಬಗಿದು ಕರುಳನ್ನು ಅಗಿಯಿರಿ. ಮೂಳೆಯನ್ನು ಮುರಿಯಿರಿ' ಎಂದು ಹೇಳುತ್ತ ಹಗ್ಗವನ್ನು ಸಡಿಲಗೊಳಿಸಿ ಅವುಗಳನ್ನು ಬಿಟ್ಟು, ತಾವೂ ನುಗ್ಗಿದರು.

ವ್ಯಾಧರ ಗುಂಪು ರೋಷ, ಆವೇಶದಿಂದ ಬೊಬ್ಬಿಕ್ಕಲು ಆ ಹಂದಿ ದಾಡೆಯನ್ನು ಕುಟ್ಟುತ್ತ, ಧಿಕ್ಕರಿಸಿ ಓಡುತ್ತ, ಘುಡು ಘುಡು ಎಂದು ಬರಸಿಡಿಲಂತೆ ಶಬ್ದ ಮಾಡಿತು. ಹರಿತ ಕಠಾರಿಗಳನ್ನು ತುಂಬಿದ ಬಂಡಿಯು ಬಾಳೆಯ ಬನದಲ್ಲಿ ಓಡಿದಂತೆ ಅದು ಶಬರ ಸಂಕುಳದತ್ತ ನುಗ್ಗಿ ಅವರನ್ನು ಸೀಳಿ ಘಾಸಿಗೊಳಿಸಿತು.

## ಹಂದಿ ನೋಡಿತ್ತು ಕತ್ತಲೆಯಿನನ ನೋಡುವಂತಾಗುಣ್ತೋತ್ತಮನಂ

ಅದು ಮಾಯಾಮೃಗವಾದುದರಿಂದ ಮಸೆವದಾಡಿಯ ಕೋರೆಯಿಂದ ಕಿಡಿಗಳನ್ನು ಹೊಮ್ಮಿಸಿ, ಘೂರ್ಮಿಸುವ ಮೂಗಿಂದ ಕಪ್ಪುಹೊಗೆ ಕಾರಿತು! ಕಂಗೆಣ್ಣುಗಳಿಂದ

ದಳ್ಳುರಿ ಸೂಸಿತು! ಬಲಿತ ಕೊರಳು, ಮುಸುಕು ಕುಸಿದ ತಲೆ, ನೆಗೆದ ಬೆನ್, ನಿಮಿರಿದ ರೋಮಗಳಿಂದ ಕೂಡಿ ಬಾಲವನ್ನು ಅಲುಗಾಡಿಸುತ್ತ ರೌದ್ರ ಕೋಪವನ್ನು ಬೀರಿತು. ಗರ್ಜಿಸುತ್ತ ಬೇಡರತ್ತ ನುಗ್ಗಿ ಅವರನ್ನು ಕೊಂದುಹಾಕಿತು. ಮೃತ್ಯುರೂಪಿಯಾಗಿ ಎಲ್ಲವನ್ನೂ ಅಸ್ತವ್ಯಸ್ತಗೊಳಿಸಿತು. ಉಳಿದ ಬೇಡರನ್ನು ಬೆಂಬತ್ತಿ, ತಲೆಯೆತ್ತಿ ತಿರುಗಾಡಿತು. ಕತ್ತಲೆ ಸೂರ್ಯನನ್ನು ನೋಡುವಂತೆ ರಾಜನನ್ನು ನೋಡಿತು.

ಆ ವರಾಹ ಇದ್ದ ಬೇಡರನ್ನೆಲ್ಲ ಸದೆಬಡಿಯಲು, ರಥದ ಮೇಲಿದ್ದ ಹರಿಶ್ಚಂದ್ರ ಕೋಪಾವಿಷ್ಟನಾದನು. 'ಮೃತ್ಯು ದೇವತೆಗೆ ಬಲಿ ಕೊಡುವೆ' ಎಂದು ಕೋದಂಡವನ್ನು ಹಿಡಿದನು. ಹೆದೆ ಮಿಡಿದು ಬಾಣವನ್ನೇರಿಸಿ ಹಂದಿಯ ಕಡೆಗೆ ಗುರಿಯಿಟ್ಟನು.

ಶಿವನು ಮನ್ಮಥನಿಗೆ ಮುನಿದಂತೆ, ಇರುಳಿಗೆ ಸೂರ್ಯ ಕೆರಳಿದಂತೆ ಕೋಪೋದ್ರಿಕ್ತನಾದ ರಾಜನು ಹಂದಿಯ ಮೇಲೆ ಬಾಣಗಳನ್ನು ಬಿಟ್ಟನು. ಆ ಬಾಣಗಳಿಂದ ಕರ್ರನೆಯ ಹಂದಿಯ ಮೈನೆತ್ತರು ಚಿಮ್ಮಿ ಹೊಮ್ಮಿದ್ದು ಇರುಳಿಗೆ ಸೂರ್ಯ ಕೆರಳಿದಂತೆ ಕಾಣುತ್ತಿತ್ತು! ಬಾಣಗಳ ಇರಿತಕ್ಕೆ ಚಂಚಲ ಹಂದಿಯು ನರಳುತ್ತ, ಹೊರಳುತ್ತ, ಬೀಳುತ್ತ, ಮೂಗು ಅರಳಿಸಿ ಕಂಬನಿಯಿಡುತ್ತ ಮರಳಿ ಕಾಡಿಗೆ ಹೋಯಿತು.

ದಟ್ಟವಾದ ಗಿಡ ಮರ, ಮಡುವು, ಬೆಟ್ಟ ಘಟ್ಟ, ಹಳ್ಳ ಕೊಳ್ಳ, ಸಂದಿಗೊಂದಿಗಳಲ್ಲಿ ಹೊಕ್ಕು ಹಂದಿ ಸಾಗಿತು. ಎದುರು ಬಂದ ಮರಗಳನ್ನು ಮುರಿದು, ಮೆಳೆಗಳನ್ನು ಸೀಳುತ್ತ ಬೆದರಿ ಓಡಿತು. ಅದನ್ನು ರಾಜ ಬೆನ್ನಟ್ಟಿ ಹೋದನು.

ಬಾಣದ ಏಟಿಗೆ ಸಿಕ್ಕಂತೆ, ಸಣ್ಣಕತ್ತಿಯ ಹೊಡೆತಕ್ಕೆ ದೇಹ ಕೊಟ್ಟಂತೆ, ಬಳಲಿ ಸತ್ವ ಹಿಂಗಿ ಬಾಡಿದಂತೆ, ನಡೆಗೆಟ್ಟು ನಿಲ್ಲುವಂತೆ ಅದು ಕಂಡಿತು. ನೆಲಕ್ಕೆ ಬಿದ್ದಿತೊ ಎಂಬ ಹಲವು ರೀತಿಯಲ್ಲಿ ಮೋಸಗೊಳಿಸಿ ನಂಬಿಸುತ್ತ ಅದು ರಾಜನನ್ನು ತನ್ನತ್ತ ಸೆಳೆಯುತ್ತ ಹೋಯಿತು. ರಾಜನು ಆಯಾಸವನ್ನು ಲೆಕ್ಕಿಸದೆ ತನ್ನ ಸಮೂಹದೊಡನೆ ಅದರ ಬೆನ್ನಟ್ಟಿ ಹೋದನು.

ಧರೆಯಲ್ಲಿ ಅತಿ ವೇಗದ ಪ್ರಾಣಿ ಹರಿಣ. ಹರಿಣಕ್ಕಿಂತ ವಾಯು, ವಾಯುವಿಗಿಂತ ಬಾಣ, ಬಾಣಕ್ಕಿಂತ ದೃಷ್ಟಿ, ದೃಷ್ಟಿಗಿಂತ ಮನಸ್ಸು ವೇಗದಲ್ಲಿ ಮಿಗಿಲಾದವು. ಅಂತಹ ಮನೋವೇಗಕ್ಕಿಂತ ಮಿಗಿಲಾಗಿ ಹರಿಶ್ಚಂದ್ರನ ರಥಾಶ್ವಗಳು ಓಡುತ್ತಿದ್ದರೂ – ಆ ಮಾಯಾ ವರಾಹವನ್ನು ಹಿಡಿಯಲು ಸಾಧ್ಯವಾಗಲಿಲ್ಲ!

# ವಿಶ್ವಾಮಿತ್ರಾಶ್ರಮ ಪ್ರವೇಶ

ದಾರಿಯಲ್ಲಿ ಕಂಡು, ದಾರಿ ತಪ್ಪಿಸಿ ಮತ್ತೆ ಕಾಣದಂತಾಗಿ ಕಾಡಿನಲ್ಲಿ ಅಡಗಿ ಮಾಯವಾದ ಎಕ್ಕಲವು – ಅಲ್ಲಲ್ಲಿ ಸುಳಿದು ಮತ್ತೆ ಕಾಣದಂತಾಗುತ್ತಿತ್ತು. ಅದರಿಂದ ರಾಜನ ಧೃತಿ ಅಡಗಿ, ಭಯ ಆವರಿಸಿ ದಣಿವಾಯಿತು. ಬಾಯಾರಿ, ತನು ಬೆವರಿ ಮುಖ ಬಾಡಿತು. ಆಗ ಸಮೀಪದಲ್ಲಿ ರಾಜನಿಗೆ ವಿಶೇಷ ಸೊಗಸಿನಿಂದಿರುವ ಮಂಗಳ ತಪೋವನ ಕಂಡಿತು. ಅಲ್ಲಿ ರಾಜನು–ಪದ್ಮಾಸನದಲ್ಲಿ ಕುಳಿತು ಮೈಮೇಲೆ ಹುತ್ತಬೆಳೆದು, ಮರಗಿಡಗಳು ಹುಟ್ಟಿದ ತಪಸ್ವಿಗಳನ್ನು ಕಂಡನು. ನಿರೋಗಿ, ಸುಶೌಚಿ, ಬ್ರಹ್ಮಚಾರಿಗಳಾಗಿ ಶಿವನನ್ನು ಒಲಿಸಿಕೊಂಡ ಮುನೀಶ್ವರರು ಅಲ್ಲಿದ್ದರು.

ಆ ತಪೋವನದಲ್ಲಿ ನಾರುವಸ್ತ್ರವನ್ನು ಧರಿಸಿದ ಋಷಿಕುಮಾರರಲ್ಲಿ ಕೆಲವರು ಗೆಡ್ಡೆ ಗೆಣಸುಗಳನ್ನು ಕೀಳುವ, ಹೂ ಕೊಯ್ಯುವ, ಕೃಷ್ಣಾಜಿನವನ್ನು ಹೊಲಿಯುವ, ರುದ್ರಾಕ್ಷೆಯನ್ನು ಪೋಣಿಸುವುದರಲ್ಲಿ ತೊಡಗಿದ್ದರು. ಮತ್ತೆ ಕೆಲವರು ಮುಂಜೆಹುಲ್ಲಿನಿಂದ ಮಾಡಿದ ಉಡಿದಾರ ತಯಾರಿಸುವ, ಭಸ್ಮ ಯಜ್ಞೋಪವೀತವನ್ನು ಸಿದ್ಧಪಡಿಸುವ, ಸಮಿತ್ತನ್ನು ತರುವ ಕಾಯಕದಲ್ಲಿದ್ದರು. ಅವರಿಗೆ ರಾಜನು ವಿನಯದಿಂದ ಕೈ ಮುಗಿದನು.

ಅಲ್ಲಿ ಸಿಂಹದೊಡನೆ ಕಲೆತ ಆನೆಗಳು, ಹುಲಿಯ ಸಮೂಹದಲ್ಲಿ ಜಿಂಕೆಗಳು, ಮುಂಗುಸಿಯ ತಲೆಯ ಮೇಲೆ ನಿಂತು ನವಿಲಿನ ನೃತ್ಯ ನೋಡಿ ಒಲೆದಾಡುವ ಸರ್ಪಗಳನ್ನು ಕಂಡು ರಾಜ ಆಶ್ಚರ್ಯಪಟ್ಟನು.

ಆ ತಪೋವನದಲ್ಲಿ ಒಂದೆಡೆ ಪುರಾಣ ಪ್ರಸಂಗ, ತರ್ಕ ಸಂವಾದ, ಉಪನಿಷದ್ ಅರ್ಥ ಚಿಂತನೆಗಳು ನಡೆಯುತ್ತಿದ್ದವು. ಇನ್ನೊಂದೆಡೆ ಸ್ತೋತ್ರ ಪಠನಗಳಿಂದ ಶಿವಾರ್ಚನೆ ನಡೆದು ಗಂಟೆಯ ನಾದದಲ್ಲಿ ಭಕ್ತಿ ಆವರಿಸಿತ್ತು. ಮತ್ತೊಂದೆಡೆ ಹೋಮಾದಿ ಕ್ರಿಯೆಗಳು ನಡೆಯುತ್ತ ಹೋಮ ಸ್ವಾಧಾಂತ್ಯದ ಸಂಭ್ರಮವಿತ್ತು. ಅದೆಲ್ಲವನ್ನೂ ಕಂಡು ಹರಿಶ್ಚಂದ್ರನು ಸಂತೋಷಚಿತ್ತನಾದನು.

ಆ ತಪೋವನದಲ್ಲಿ ಮರಗಳು ಫಲಭಾರದಿಂದ ತೂಗಿ ಬಾಗಿದ್ದವು. ಅವುಗಳ ಕೆಳಗೆ ನಳನಳಿಸುವ ಎಳಲತೆಗಳು ಬೆಳೆದಿದ್ದವು. ತಿಳಿಗೊಳದ ನೈದಿಲೆಯ ಕಂಪು, ಮರಳದಿಣ್ಣೆ, ಬೀಸುವ ತಂಗಾಳಿ ತಂಪನ್ನು ಕಂಡ ಮಂತ್ರಿ ಸತ್ಯಕೀರ್ತಿಯು ಅದು ಬೀಡು ಬಿಡಲು ಸೂಕ್ತ ಸ್ಥಳ ಎಂದು ರಾಜನಲ್ಲಿ ಬಿನ್ನವಿಸಿದನು. ಆಗ ರಾಜನು ಪತ್ನಿ ಪುತ್ರರೊಂದಿಗೆ ರಥದಿಂದಿಳಿದನು.

ಆಯಾಸಗೊಂಡ ಕುದುರೆಗಳನ್ನು ರಥದಿಂದ ಬಿಚ್ಚಿ ಶೀತಲ ಜಲ ಪ್ರದೇಶದಲ್ಲಿ ಅವುಗಳನ್ನು ಬಿಟ್ಟು, ಮೈತೊಳೆದರು. ಹಸಿರು ಹುಲ್ಲನ್ನು ಕೊಯ್ದು ಅವುಗಳ ಮುಂದೆ ಹರಡಿದರು. ನಟ್ಟಡವಿಯಲ್ಲಿ ಅನುಸರಿಸಿ ಬಂದ ಸೈನ್ಯವನ್ನು ಸುಧಾರಿಸಿಕೊಳ್ಳಲು ತಿಳಿಸಿದ ಮಂತ್ರಿಯು ರಾಜನಿಗೆ ಶೈತ್ಯೋಪಚಾರಗಳನ್ನು ಏರ್ಪಡಿಸಿ, ವಿಶ್ರಮಿಸಲು

ವ್ಯವಸ್ಥೆ ಮಾಡಿದನು. ರಾಜನು ಮಂತ್ರಿ ಸತಿಸುತರ ಸಹಿತ ಸುಖದಿಂದ ಕುಳಿತು ತಾಂಬೂಲ ಸವಿದನು. ಅಲ್ಲಿ ನಲಿದಾಡುವ ಗಿಳಿ, ನವಿಲು, ಹಂಸ, ಕೋಕಿಲ, ಪಾರಿವಾಳಗಳನ್ನು ಕಂಡು ಹರ್ಷಗೊಂಡನು. ಮಂತ್ರಿಯೊಡನೆ ಸಂಭಾಷಿಸುತ್ತ,

'ಎಲೈ ಸತ್ಯಕೀರ್ತಿಯೇ, ಪುಣ್ಯಮಯವಾಗಿರುವ ಈ ತಪೋವನ ಯಾವ ಮುನಿಗೆ ಸೇರಿದುದೋ ಮಹಾದೇವನೆ ಬಲ್ಲ! ಆತನ ಶಾಂತಿಯಿಂದ ಶಶಿ, ಚಾರಿತ್ರದಿಂದ ಗಂಗೆ, ತಪಸ್ತೇಜದಿಂದ ದಿನಕರ, ಸುಳಿದಾಟದಿಂದ ತಂಗಾಳಿ, ನುಡಿಯ ಮೋಹನದಿಂದ ಸುಧೆ, ಔದಾರ್ಯದಿಂದ ಕಲ್ಪವೃಕ್ಷ ಜನಿಸದಿರದು.'

'ಮಹಾ ಪ್ರಭುವೆ, ತಮ್ಮ ನುಡಿ ಸತ್ಯ. ಅಗೋ ನೋಡಿ, ಅಲ್ಲೊಬ್ಬ ಮುನಿ ಬರುತ್ತಿರುವನು. ಆತನನ್ನು ವಿಚಾರಿಸೋಣ.'

'ನನಗೆ ಹೆಚ್ಚು ಕುತೂಹಲ ಉಂಟಾಗಿದೆ. ನಾನೇ ವಿಚಾರಿಸುವೆ' ಎಂದು ಹೇಳಿದ ರಾಜ ಮುನಿಗಳಿಗೆ ವಂದಿಸಿ ಕೇಳಿದನು.

'ಪೂಜ್ಯರೆ, ಇದು ಯಾವ ಆಶ್ರಮ?'

'ರಾಜನ್, ಇದು ಪೂಜ್ಯ ವಿಶ್ವಾಮಿತ್ರ ಮುನಿಗಳ ಆಶ್ರಮ.'

## ಮರೆದುರೆ ಮುಟ್ಟಿದಡೆ ಮುಳ್ಳು ನೆಡದಿಹುದೆ

ಆ ನುಡಿ ಕಿವಿಗೆ ಬೀಳುತ್ತಿದ್ದಂತೆ ರಾಜನ ಸುಖ ಕುಸಿಯಿತು. ಹಾವನ್ನು ತುಳಿದಂತೆ ಮನಸ್ಸು ಬೆದರಿತು. 'ಗುರುವಾಜ್ಞೆ ಮೀರಿದೆನಲ್ಲ. ಇನ್ನೇನು ಆಗುವುದೊ' ಎಂದು ತನ್ನ ಒಳಮನದಲ್ಲಿ ಅಂದುಕೊಂಡು ಚಿಂತೆಗೀಡಾದನು. ಪ್ರಕಟವಾಗಿ ಮಂತ್ರಿಯೊಡನೆ,

'ಮಂತ್ರಿಯೇ, ನಾನು ಶಿವಪೂಜೆಯನ್ನು ಮಾಡಿ, ಯಾಗಗಳನ್ನು ನಡೆಸಿ, ಸತ್ಯವನ್ನು ನುಡಿದು, ದಾನ ಧರ್ಮಗಳನ್ನು ಮಾಡಿದೆನು. ದೇಶವನ್ನು ಪಾಲಿಸಿ, ಕುಲಾಚಾರದಿಂದ ನಡೆದು ಅಖಿಲ ಮುನಿಜನವನ್ನು ಆರಾಧಿಸಿದೆನು. ಅವಿಚಾರವನ್ನು ಬಿಟ್ಟು ಹಲವು ಪುರಾಣಕಥೆಯನ್ನು ತಿಳಿದೆನು. ಆದರೆ ಇಂದು ಗುರುವಿನ ಆಜ್ಞೆಯನ್ನು ಉಲ್ಲಂಘಿಸಿ, ಪಡೆದ ಪುಣ್ಯವನ್ನು ಕೆಡಿಸಿಕೊಂಡೆನು. ಪಾಪಿಯಾದೆನು.'

'ಮಹಾರಾಜರೇ, ಹಾಗೆ ನುಡಿಯಬೇಡಿ. ರಕ್ಕಸ ಹಂದಿ ಇಲ್ಲಿಗೆ ಕರೆತಂದಿತು. ನೀವು ಅಂತಹ ಪಾಪವನ್ನೇನೂ ಮಾಡಿಲ್ಲ.'

'ಓಹ್ ಮಂತ್ರಿವರ್ಯನೇ, ಗುರುವೇ ಸದಾಶಿವ, ಗುರುಪತ್ನಿಯೇ ಪಾರ್ವತಿ, ಗುರುಸುತರೇ ಗಣಪತಿ ಷಣ್ಮುಖರು; ಗುರುಸಖರೇ ಪ್ರಮಥಗಣರು, ಗುರುವಿನ ನುಡಿಯೇ ಪಂಚಾಕ್ಷರಿ ಮಂತ್ರ; ಗುರುನಾಮ ಸ್ಮರಣೆಯೇ ಸ್ತೋತ್ರ, ಗುರುವಿನ ತೃಪ್ತಿಯೇ ಶಿವನ ತೃಪ್ತಿ ಎಂದು ನಂಬಿದವನೇ ಧನ್ಯ! ಗುರುವಿನ ಆಜ್ಞೆ ಮೀರಿದ ನನಗೆ ಹಾನಿಯಾಗದೆ ಇರದು.'

ಹರಿಶ್ಚಂದ್ರರಾಜನ ಮನಸ್ಸಿನ ತಳಮಳವನ್ನು ಅರಿತ ಮಂತ್ರಿಯು ಸಮಾಧಾನ ಪಡಿಸುತ್ತ ನುಡಿದನು.

'ಪ್ರಭುವೇ, ತಾವು ಬುದ್ಧಿ ಪೂರ್ವಕವಾಗಿ ಗುರು ವಚನವನ್ನು ಮೀರಿ ನಡೆದಿಲ್ಲ. ತಮ್ಮ ಪ್ರಜಾಹಿತ ಕರ್ತವ್ಯದ ಉತ್ಸಾಹದಲ್ಲಿ ಅಜ್ಞಾನದಿಂದ ನಡೆದುದು ಪಾಪ ಕಾರ್ಯವಲ್ಲ.'

'ಓಹ್ ಜಾಣ ಮಂತ್ರಿಯೆ. ಅಜ್ಞಾನದಿಂದ ಮೆಟ್ಟಿದರೆ ಮುಳ್ಳು ಚುಚ್ಚದೆ ಇರುವುದೆ?'

'ಅರಸನೇ, ಮನಸ್ಸಿನಲ್ಲಿ ಕೊರಗುತ್ತ ಇಲ್ಲಿದ್ದು ವಿಶ್ವಾಮಿತ್ರ ಮುನಿಯ ಕಾಟಕ್ಕೆ ಗುರಿಯಾಗಿ, ಗುರುವಿನ ಆಜ್ಞೆಗೆಟ್ಟು ಪತಿತನಾಗುವುದಕ್ಕಿಂತ ಈ ತಪೋವನವನ್ನು ಬಿಟ್ಟು ಹೋಗುವುದೇ ಸರಿ ಅಲ್ಲವೆ?'

'ಮಂತ್ರಿಯೇ ಅದು ಆಗದು. ತನ್ನ ತಪೋವನಕ್ಕೆ ಬಂದು ತನಗೆ ನಮಿಸದೆ ಹೋದನು ಎಂದು ಕೋಪಗೊಂಡು ವಿಶ್ವಾಮಿತ್ರನು ಶಪಿಸದೆ ಇರನು.'

ರಾಜನ ಆ ನುಡಿ ಕೇಳಿ ಚಿಂತಾಕ್ರಾಂತನಾದ ಮಂತ್ರಿಯು ಸಮಸ್ಯೆಗೆ ಪರಿಹಾರವೆಂಬಂತೆ ಹೀಗೆ ಹೇಳಿದನು :

'ಭೂಪಾಲನೇ, ಆತ ಶಪಿಸಿ ಮಾಡುವುದೇನು? ವಿನುತ ಗುರುವಾಜ್ಞೆ ತಪ್ಪದಿರುವುದೇ ಲೇಸು. ಹೊರಟು ಹೋಗುವುದೇ ಸರಿ.'

'ಸತ್ಯಕೀರ್ತಿಯೇ, ಆಸೆ ಪಡುವ ಸ್ತ್ರೀಯರ ನಡುವೆ ಇದ್ದು ಜಿತೇಂದ್ರಿಯನಾಗುವುದು ಅತಿಶಯವಲ್ಲ. ಸ್ವರ್ಗದಲ್ಲಿದ್ದು ಜಿತೇಂದ್ರಿಯನಾಗಿರುವುದು ವಿಶೇಷವಲ್ಲ. ಸತ್ಯವನ್ನು ನುಡಿಯುವುದೇ ನನ್ನ ವ್ರತ. ಅದರ ಆಚರಣೆಗೆ ಸದಾ ಗುರುವಿನ ಅನುಗ್ರಹವಿರಬೇಕು. ಇಲ್ಲಿ ಇದ್ದರೂ, ಇಲ್ಲದಿದ್ದರೂ ಕೇಡು ತಪ್ಪದು. ಅದು ನಿಶ್ಚಯ' ಎಂದು ಹೇಳಿದ ರಾಜನು – ಕೌಶಿಕನ ಆಶ್ರಮವನ್ನು ಹೊಕ್ಕ ಚಿಂತೆಯಲ್ಲಿ ಮುಳುಗಿ ಸತಿ ಚಂದ್ರಮತಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದನು. ಆ ಸಮಯದಲ್ಲಿ ಕಣ್ಮುಂದೆ ಹೊಳೆಯುವ ಸತಿಯ ಮೋಹನ ಮುಖ, ಸುತನ ಸವಿನುಡಿ, ಸುಳಿ ತಂಗಾಳಿಯಿಂದ ಅರಸನ ಚಿಂತೆ ಸ್ವಲ್ಪ ಮರೆಯಾಯಿತು. ಸತಿಯು ಮಡಿಚಿ ನೀಡಿದ ಎಲೆಅಡಿಕೆಯ ಕೈ ರಾಜನಿಗೆ ಸುಖನೀಡಿತು. ಚಿಂತೆಗಳು ದೂರವಾಗಿ ಆಯಾಸದಿಂದ ಶರೀರ ಸೋತು, ಜೋಮು ಹಿಡಿದ ಹುಬ್ಬು ಅತಿಭಾರವಾಗಿ ಕಣ್ಣುಮುಚ್ಚಿ ನಿದ್ರೆಗೆ ಜಾರಿದನು.

ಸುಖನಿದ್ರೆಯಲ್ಲಿರುವಾಗ ರಾಜನು ದುಃಖದಿಂದ ಕೂಡಿದ ಒಂದು ಕನಸು ಕಂಡು ನೊಂದನು. ಬೆದರಿದಂತೆ ಭೋಂಕನೆ ಎದ್ದು ಗಾಬರಿಯಾಗಿ ಸುತ್ತಲೂ ನೋಡಿದನು. ಕಂದಿದ ಮುಖ, ಒಣಗಿದ ಬಾಯಿ, ಹೆದರಿದ ನೋಟ, ನಡುಗುವ ಮೈಯಿಂದ ರಾಜನು ಬೆಚ್ಚಿಬಿದ್ದನು. ಅದನ್ನು ಕಂಡು ದಿಗ್ಭ್ರಾಂತಳಾದ ರಾಣಿ ಚಂದ್ರಮತಿಯು ತನ್ನ ಮುಂಗಯ್ಯ ಕಡಗದಿಂದ ರಾಜನಿಗೆ ದೃಷ್ಟಿ ನಿವಾಳಿಸಿ ಸಂತೈಸುತ್ತ ಮೃದುವಾಗಿ ನುಡಿದಳು,

'ರಾಜ ಶ್ರೇಷ್ಠನೇ, ನೀನು ಯುದ್ಧದಲ್ಲಿ ವೈರಿರಾಜರನ್ನು ಅಂಜಿಸಿ, ನಡುಗಿಸಿ, ಕೊರಗಿಸಿ, ಬಾಡಿಸಿ, ಬಳುಕಿಸುವ ಪ್ರಖ್ಯಾತ ವೀರ. ನೀನು ನಡುಗುವುದೇತಕ್ಕೆ?'

**ತರುಣಿ ಕೇಳೊಂದು ಕನಸಂ ಕಂಡೆ**

'ತರುಣಿ ಕೇಳು. ನಾನೊಂದು ಕನಸನ್ನು ಕಂಡೆ. ಆ ಕನಸು ನಿಜವೆಂದೇ ನಾನು ಕಣ್ಣು ತೆರೆದೆ.'

'ಹೌದೇ?'

'ಹೌದು. ಆ ಕನಸನ್ನು ಕೇಳು.'

ರಾಜನ ನುಡಿಗೆ ಹ್ಞೂಗುಡುತ್ತ ರಾಣಿ ಕಿವಿಯಾದಳು. ಅರಸ ತನ್ನ ಮಾತು ಮುಂದುವರೆಸಿ,

'ನಾನು ಓಲಗವನ್ನು ನಡೆಸುವಾಗ ಒಬ್ಬ ಮುನಿಯು ಘುಡು ಘುಡಿಸುತ್ತ ಬಂದು ಮಂಟಪದ ಕಂಬವೆಲ್ಲವನ್ನೂ ಕೆಡವಿ ಹಾಕಿದ. ಹೊಂಗಳಸಗಳನ್ನು ಕಿತ್ತೆಸೆದ. ನೆರೆದ ಸಭೆಯಲ್ಲಿ ನನ್ನನ್ನು ಕೆಡಹಿ ಸಿಂಹಾಸನವನ್ನು ಕೊಂಡೊಯ್ದ. ಆಗ ನನ್ನೆದೆಯ ಮೇಲೆ ಕುಳಿತ ಕಾಗೆಯೊಂದು ನನ್ನನ್ನು ಕರೆಯಿತು. ಬಳಿಕ ನಾನು ಗಿರಿಯನ್ನು ಏರಿ ಶಿಖರದಲ್ಲಿ ಪ್ರಕಾಶಿಸುವ ಮಣಿಗೃಹವನ್ನು ಹೊಕ್ಕೆನು.'

'ನನ್ನ ಅರಸನೇ, ಇದಕ್ಕೆ ಇಷ್ಟು ದುಗುಡವೆ? ನಿಮ್ಮ ಕನಸಿನ ಕುಪಿತ ಮುನಿ ಕೌಶಿಕ. ನಿಮಗೆ ತೊಂದರೆಗಳೆಂಬುದು ಮುನಿಯ ಉಪದ್ರವದಿಂದ ನಮಗೆ ಬರುವ ಕಿರಿದಲ್ಪ ಸಂಕಟ. ಇದಕ್ಕೆ ನಾವು ಹೆದರದಿದ್ದರೆ ನಮಗೆ ಮುಂದೆ ಲೇಸುಂಟು. ಪರ್ವತದ ತುದಿಯ ಗೃಹವನ್ನು ಪ್ರವೇಶಿಸುವುದೆಂಬುದು ನಮಗೆ ಸಿಗುವ ಮಹಾಪದವಿ. ಅದು ದೊರಕುವುದು ಸತ್ಯ. ನೀವು ಸಂಕಟಪಡಬೇಡಿ.'

'ನಲ್ಮೆಯ ಚಂದ್ರಮತಿ, ನಿನ್ನ ಕನಸಿನ ವಿಶ್ಲೇಷಣೆ ತುಂಬಾ ಅರ್ಥಗರ್ಭಿತವಾಗಿದೆ.'

'ನನ್ನ ಮನದರಸ, ಅಷ್ಟೆ ಅಲ್ಲ; ವಿಚಾರ ಮಾಡಲು ಈ ಕನಸು ಗುರುವಾಜ್ಞೆಯನ್ನು ಮೀರಿದುದಕ್ಕೆ ಉಂಟಾಗುವ ಕೇಡಿನ ಸೂಚನೆಯಾಗಿದೆ ಎನಿಸುತ್ತದೆ.'

'ದಿಟ ರಾಣಿ, ನಾನು ಗುರುವಾಜ್ಞೆಯನ್ನು ಮೀರಿದೆ.'

**ನಿನ್ನ ಹರಣಕ್ಕೆ ಕೇಡು ಬಂದರೆ ಬರಲಿ ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ**

'ನನ್ನ ಮನದನ್ನ, ನನ್ನ ಬೇಡಿಕೆ ಇಷ್ಟೆ; ಮುನಿಯಬೇಡ. ಮಂತ್ರಿಗೆ, ಮಗನಿಗೆ, ನನಗೆ, ರಾಜ್ಯಕ್ಕೆ, ಚತುರಂಗಸೇನೆಗೆ, ಸಕಲ ಭಂಡಾರಕ್ಕೆ, ಸರ್ವ ಪರಿವಾರಕ್ಕೆ, ನಿನ್ನ ಪ್ರಾಣಕ್ಕೆ ಯಾವ ಕೇಡು ಬಂದರೂ ಸತ್ಯವನ್ನು ಬಿಡಬೇಡ. ಇದೇ ನಾನು ಕೈ ಮುಗಿದು ಕೇಳಿಕೊಳ್ಳುವುದು.'

ಚಂದ್ರಮತಿಯ ಮಾತು ಕೇಳಿದ ರಾಜನಿಗೆ – ತನ್ನ ಮಡದಿ ಏನು ಹೇಳಿದಳು? ತಾನು ಕೇಳಿಸಿಕೊಂಡುದೇನು? ತಾನೇನು ಮಾಡುವುದು? ತಾನು ಎಲ್ಲಿದ್ದೆ? ಎಲ್ಲಿಂದ ಬಂದೆ? ತನ್ನೊಡನೆ ಇದ್ದವರು ಯಾರು? ನೆಲೆಯಾವುದು? ಎನ್ನುವ ಯಾವೊಂದು ವಿಚಾರವು ಸ್ಪಷ್ಟವಾಗಲಿಲ್ಲ. ಅವನು ಮರವಟ್ಟನು! ದುಗುಡ ಅಸಮಾಧಾನವು ಮೈ ಮನಸ್ಸನ್ನು ತುಂಬಿರಲು ರಾಜನು ಚಿತ್ರಿತಗೊಂಬೆಯಂತೆ ನಿಶ್ಚೇಷ್ಟಿತನಾದನು! ಅದನ್ನು ಕಂಡ ಮಂತ್ರಿಯು,

'ಪ್ರಭುವೇ, ಹಗಲೆಲ್ಲ ಈ ವನದಲ್ಲಿದ್ದು ವಿಶ್ವಾಮಿತ್ರ ಮುನೀಶ್ವರನನ್ನು ನೋಡದೆ ಹೋಗುವುದು ಉಚಿತವಲ್ಲ. ಮುನಿದರ್ಶನ ಮಾಡಲು ಹೋಗೋಣ, ನಡೆಯಿರಿ' ಎಂದು ಹೇಳಿದನು.

**ಕೌಶಿಕನ ಹೂಂಕಾರದಿಂದೊಗೆದರಿಬ್ಬರು ಸತಿಯರು**

ರಾಜನನ್ನು ತಪೋವನಕ್ಕೆ ಕರೆತಂದ ಹಂದಿಯು ಅತ್ತ ಕೌಶಿಕನ ಕಡೆಗೆ ನಡೆಯಿತು. ಹರಿಶ್ಚಂದ್ರನ ಬಾಣಾಘಾತದಿಂದ ಸುರಿವ ಬಿಸಿನೆತ್ತರ ವೇದನೆಗೆ ನರಳುತ್ತ; ನೊರೆಹಿಡಿದ ಕಟವಾಯಿ, ಕುಸಿದ ತಲೆ, ಕುಗ್ಗಿದ ದರ್ಪದಲ್ಲಿ ತೂಗಿ ತೊನೆದಾಡುವ ಹಂದಿಯನ್ನು ವಿಶ್ವಾಮಿತ್ರ ಕಂಡನು. ನೋಡ ನೋಡುತ್ತಿದ್ದಂತೆ ಅವನ ಕೋಪದ ಕಿಚ್ಚು ಭುಗಿಲೆದ್ದಿತು. ಜಪ ಜಾರಿ, ತಪ ತಗ್ಗಿ, ಮತಿ ಕಳೆದು ಹೋಯಿತು. ಪಡೆದ ಯೋಗ ಹಿಂಗಿ, ದಯೆ ದೂರವಾಗಿ ಆನಂದವು ಇಲ್ಲವಾಯಿತು. ಹಿಂದಿನ ಘಟನೆಯನ್ನು ನೆನೆದು ಉರಿದೆದ್ದನು. 'ರಾಜ ಇಂದು ಸಿಕ್ಕಿರುವನು. ಅವನನ್ನು ಗೋಳಾಡಿಸದೆ ಬಿಡುವುದಿಲ್ಲ' ಎಂದು ಗರ್ಜಿಸುತ್ತ ಹೂಂಕರಿಸಲು ಇಬ್ಬರು ವನಿತೆಯರು ಸೃಷ್ಟಿಯಾದರು.

ಅತಿ ಕೋಪ, ಬದ್ಧ ದ್ವೇಷ, ಅನಿಮಿತ್ತ ವೈರವೇ ಮುನಿಗೆ ಹೊಲೆ. ಅದರಿಂದ ಹುಟ್ಟಿದವರಾದ ಆ ವನಿತೆಯರು ಹೊಲತಿಯರಾದರು. ಅವರು ಮುನಿಯ ಬಳಿ ಸರಿದು ನಿಂತು, 'ಮುನಿವರ್ಯರೆ, ಅಪ್ಪಣೆ ಏನು?' ಎಂದು ಕೇಳಿದರು.

ದುರ್ಮಂತ್ರ ಸಮರ್ಥನಾದ ಕೌಶಿಕನು.

'ಜನಪತಿ ಹರಿಶ್ಚಂದ್ರನು ಬಂದು ನಮ್ಮ ತಪೋವನದಲ್ಲಿದ್ದಾನೆ. ನೀವು ಅವನಿರುವಲ್ಲಿಗೆ ಹೋಗಿ, ನಿಮ್ಮ ಎಲ್ಲಾ ಬುದ್ಧಿ ಕೌಶಲವನ್ನು ಉಪಯೋಗಿಸಿ ಅವನನ್ನು ಮರುಳುಮಾಡಿ' ಎಂದು ಹೇಳಿದನು.

ಆ ವನಿತೆಯರ ಮುಂಗುರುಳಲ್ಲಿ ಕುಟಿಲತೆ, ಕಣ್ಣುಗಳಲ್ಲಿ ಚಂಚಲತೆ, ಕುಚಗಳಲ್ಲಿ ಕಠಿಣತೆಯಿತ್ತು. ಅವರು ಜಡಗತಿಯ, ಮರುಳು ನಗೆಯ, ವಕ್ರ ನುಡಿಯ ಅವಗುಣಗಳಿಂದ ಕೂಡಿದ್ದರು.

**ಕಾರಿರುಳ ಕನ್ನೆಯರು ಹಗಲಂ ನೋಡಲು ಬಂದರೊ**

ರಾಜ ಹರಿಶ್ಚಂದ್ರನ ಬಳಿಗೆ ಬಂದ ವಿಶ್ವಾಮಿತ್ರನ ಮಾಯದ ತರುಣಿಯರು– ಕಾಳರಾತ್ರಿಯ ಕನ್ನೆಯರು ಹಗಲನ್ನು ನೋಡಲು ಬಂದರೋ ಎಂಬಂತಿದ್ದರು! ಸುರಾಸುರರು ಸಮುದ್ರಮಥನ ಮಾಡುವಾಗ ಹುಟ್ಟಿದ ಹೊಸ ವಿಷದ ಹೊಗೆಯಿಂದ ಕಪ್ಪಾಗಿ ಕನಲಿದ ಜಲದೇವತೆಯರು ಮನದಲ್ಲಿ ನೊಂದು ಮನುಷ್ಯರಾಗಿ ಬಂದಿರುವರೋ ಎಂಬಂತಿದ್ದರು! ಬ್ರಹ್ಮನು ನೀಲಮಣಿಯಿಂದ ಮಾಡಿದ ಗೊಂಬೆಗಳು ಜೀವಪಡೆದು ಬಂದಿರುವವೋ ಎಂಬಂತಿದ್ದರು!

ಅವರು ರಾಜನನ್ನು ನೋಡುತ್ತಲೆ, 'ಮಝು, ಭಾಪುರೇ, ರಾಯ ಕಂಟಕರಾಯ, ರಾಯ ಜಗಜಟ್ಟಿ, ರಾಯ ಭುಜಬಲ ಭೀಮ. ರಾಯ ಮರ್ದನರಾಯ, ಜೀಯ, ಸ್ಥಿರ ಜೀವ' ಎಂದು ಕೀರ್ತಿಸಿದರು.

ಗಾನ ರಾಣಿಯರಾದ ಅವರು ದಂಡಿಗೆ ಹಿಡಿದು ಮಧುರವಾಗಿ ಹಾಡಿದರು. ತಮ್ಮ ಸಂಗೀತದ ತಾಳಲಯಕ್ಕೆ ತಕ್ಕಂತೆ ತೊನೆದಾಡಿದರು. ಯಥೋಚಿತ ತಾರ ಮಧುರ ಮಂದ್ರ ಧ್ವನಿಗಳಿಂದ ಹಾಡಿ ಭೂಪತಿಯ ದುಗುಡವನ್ನು ದೂರ ಮಾಡಿದರು.

ಆ ರಾಗ ರಸಲಹರಿಯಲ್ಲಿ ಮಿಂದ ರಾಜನಿಗೆ; ಹಂದಿಯ ಬೆನ್ನಟ್ಟಿ ಬಂದ ದಣಿವು, ಮುನಿ ರಕ್ಕಸನ ಬನಕ್ಕೆ ಬಂದ ಅಂಜಿಕೆ, ಗುರುವಿನ ಆಜ್ಞೆಯನ್ನು ಉಲ್ಲಂಘಿಸಿದೆನಲ್ಲ ಎಂಬ ದುಃಖ, ಕನಸು ಉಂಟು ಮಾಡಿದ ಭಯ ದೂರ ಸರಿದವು. ಆ ಗಾನ ವೈಭವಕ್ಕೆ ಮನಸೋತ ಹರಿಶ್ಚಂದ್ರನು ಗಾನರಾಣಿಯರಿಗೆ ತನ್ನ ಆಭರಣಗಳನ್ನು ಉಡುಗೊರೆಯಾಗಿ ನೀಡಿದನು. ಅದಕ್ಕೆ ತೃಪ್ತರಾಗದ ಆ ಮಾಯಾ ಗಾಯಕಿಯರು ರಾಜನಿಗೆ,

'ಭೂನಾಥನೇ, ಬಡತನದ ಹೊತ್ತಿನಲ್ಲಿ ಆನೆ ದೊರಕಿ ಫಲವೇನು? ನೀರಡಿಕೆಯಾದ ಹೊತ್ತಿನಲ್ಲಿ ತುಪ್ಪ ದೊರೆತರೆ ಫಲವೇನು? ಬಾಯಿಲೆ ಬಂದು ಬಿದ್ದಿರುವವನಿಗೆ ರಂಬೆ ದೊರೆತರೆ ಫಲವೇನು? ಸಾಯುವ ಹೊತ್ತಿನಲ್ಲಿ ನೆಲದ ಒಡೆತನ ದೊರಕಿ ಫಲವೇನು? ಕಡುಬಿಸಿಲು ಹೊಡೆದು ಬೆಂಡಾಗಿ ಬೀಳುವ ನಮಗೆ ನೀನೊಲಿದು ನೀಡಿದ ನವರತ್ನ ಖಚಿತ ಒಡವೆಗಳಿಂದ ಫಲವೇನು?' ಎಂದು ಪ್ರಶ್ನೆ ಮಾಡಿ ತಮ್ಮ ಚತುರ ಮಾತನ್ನು ಮುಂದುವರೆಸುತ್ತ,

### ನಿನ್ನ ಮುತ್ತಿನ ಸತ್ತಿಗೆಯನಿತ್ತು ಸಲಹು ಭೂಭುಜ

'ಕಡಲಿನಲ್ಲಿ ಮುಳುಗುವವನಿಗೆ ತೆಪ್ಪವನ್ನು, ದರಿದ್ರನಿಗೆ ಚಿನ್ನವನ್ನು, ರೋಗಿಗೆ ಅಮೃತವನ್ನು ಕೊಟ್ಟರೆ ಅವರ ಹರ್ಷಕ್ಕೆ ಮೇರೆ ಇರುವುದಿಲ್ಲ. ಈ ಹೊತ್ತಿನ ಸುಡು ಸುಡುವ ಬಿರುಬಿಸಿಲಿಗೆ ಬಾಯ್ಬತ್ತಿ ಹೋಗುತ್ತಿದೆ. ಝಳ ಸುತ್ತುವರೆದು ಸಾವುಂಟಾಗುವಂತಿದೆ. ರಾಜನೇ, ನಿನ್ನ ಮುತ್ತಿನ ಸತ್ತಿಗೆಯನ್ನು ಇತ್ತು ಕಾಪಾಡು.'

'ಓಹ್ ಮಧುರ ಗಾಯಕಿಯರೆ, ರವಿಕುಲದಲ್ಲಿ ಹುಟ್ಟಿದ ರಾಜರಿಗೆ ಪಟ್ಟವನ್ನು ಕಟ್ಟುವ ದಿನ ಈ ಬೆಳ್ಗೊಡೆ ಇಲ್ಲದಿದ್ದರೆ ಅವರಿಗೆ ಅರಸುತನ ಸಲ್ಲುವುದಿಲ್ಲ. ಯುದ್ಧರಂಗದಲ್ಲಿ ಇದನ್ನು ಕಂಡು ಹಗೆಗಳು ಪಲಾಯನ ಗೈಯ್ಯುತ್ತಾರೆ. ಇದರ ನೆರಳಿನಲ್ಲಿ ಯಾವ ರಾಜನು ಇರುವನೋ ಅವನಿಗೆ ಎಡರು ತೊಡರು; ಬಡತನ, ವ್ಯಥೆ, ಅಪಕೀರ್ತಿ, ಅಪಜಯಗಳು ಉಂಟಾಗುವುದಿಲ್ಲ. ಇದನ್ನೆಲ್ಲಾ ತಿಳಿದು ಈ ಸತ್ತಿಗೆಯನ್ನು ನಿಮಗೆ ಕೊಡಲು ಸಾಧ್ಯವೆ?'

'ಮಹಾರಾಜರೇ, ಕೊಡಬಹುದಾದ ಒಡವೆಗಳನ್ನು ಯಾರಾದರೂ ಕೊಡುತ್ತಾರೆ. ಕೊಡಬಾರದ ಒಡವೆಯನ್ನು ಕೊಡುವುದೇ ಅಪೂರ್ವ ಲಕ್ಷಣ.'

'ವಿಶೇಷವಾದುದನ್ನು ಬೇಡುವವರ ಬಾಯಿ ಹರಿಯುತ್ತದೆಯೆ? ಬೇಡಿದುದನ್ನು ಕೊಡುವ ದೊರೆಯಾರು?'

'ಬಲಿ, ದಧೀಚಿ, ಶಿಬಿ ಮಹಾರಾಜರು ಕೇಳಿದ ದಾನ ಕೊಟ್ಟಿಲ್ಲವೆ?'

'ಅದು ತ್ಯಾಗವಲ್ಲ, ದಾನ.'

'ದಾನವಾಗಿಯೇ ಸತ್ತಿಗೆಯನ್ನು ಕೊಡು'

'ಗಾಯಕಿಯರೇ, ನೀವು ಹಾಡಿ ಮೆಚ್ಚಿಸಿದ ಕಾರಣದಿಂದ ಉಡುಗೊರೆಯಾಗಿ ನಾನು ನೀಡಿದ್ದು ತ್ಯಾಗ. ಬೇಡಿದುದನ್ನು ನೀಡುವುದು ದಾನ. ಅದರಲ್ಲಿ ದೊಡ್ಡಸ್ಥಿಕೆ, ಉಪಕಾರ ಉಂಟು. ಕೌಶಿಕಮುನಿಯಂತವರಿಗೆ ನೀಡಿದರೆ ಆರಾಧನೆ.'

'ಅರಸ, ನಾವು ಸೌಂದರ್ಯವತಿಯರು. ನಮ್ಮನ್ನು ಶಂಕಿಸದೆ ಸತ್ತಿಗೆಯನ್ನು ನೀಡಿದರೆ ನಿನಗೆ ಕೀರ್ತಿಯುಂಟಾಗುತ್ತದೆ. ಕರುಣಿಸಿಕೊಟ್ಟರೆ ಪುಣ್ಯ ಬರುತ್ತದೆ.'

'ಅನುನಯದಲ್ಲಿ ಎಲ್ಲವನ್ನೂ ಕೊಡಬಹುದು, ಬಿಡಬಹುದು. ಆದರೆ ತನ್ನ ತಾಯಿ, ತಂದೆ, ಪತ್ನಿ, ದೈವ, ಪರಿವಾರವನ್ನು ಕೊಡುವ ಕಲಿಗಳು ಈ ಲೋಕದಲ್ಲಿ ಜನಿಸಲಾರರು!'

'ಮಹಾಪ್ರಭುವೆ, ಈಗ ನೀನು ಹೇಳಿದ್ದಷ್ಟರಲ್ಲಿ ಯಾವುದನ್ನು ಕೇಳಿದರೂ ಕೊಡಬೇಡ. ಆದರೆ ಬೆಳ್ಗೊಡೆಯನ್ನು ಕೊಡಲು ನಿನಗೆ ಯಾಕಿಷ್ಟು ಲೋಭ?'

'ಇದಲ್ಲದೆ ನನಗೆ ಬೇರೆ ಮಾತಾಪಿತರು ಇಲ್ಲ. ಇದು ವಂಶ ಪರಂಪರೆಯಿಂದ ಬಂದುದರಿಂದ ತಂದೆ. ನೆಳಲ ತಂಪೆರೆಯುವುದರಿಂದ ತಾಯಿ. ಪರರಿಗೆ ಕೊಡಬಾರದಾಗಿರುವುದರಿಂದ ಪತ್ನಿ. ಪಟ್ಟ ಕಟ್ಟಿಸಿಕೊಳ್ಳುವಾಗ ಪೂಜಿಸುವುದರಿಂದ ದೈವ. ಯುದ್ಧರಂಗದಲ್ಲಿ ವೈರಿಗಳನ್ನು ನಡುಗಿಸುವುದರಿಂದ ಚತುರಂಗ ಬಲ. ಇದನ್ನು ತಿಳಿದು ಬೇಡುವವರನ್ನು ಅತಿ ಮರುಳರು ಎನ್ನುವುದಿಲ್ಲವೆ?'

## ನೀನೆಮಗೆ ವಲ್ಲಭನಾಗಿ ಚಿತ್ತದುಮ್ಮಳಿಕೆಯಂ ಕಳೆ

ರಾಜನ ಆ ಮಾತನ್ನು ಕೇಳಿದ ಅನಾಮಿಕ ಮಾಯಾವನಿತೆಯರು ಕೈ ಮುಗಿದು ಇನ್ನೊಂದು ಅತಿ ಆಸೆಯನ್ನು ಮುಂದಿಟ್ಟರು.

'ಹರಿಶ್ಚಂದ್ರ ಭೂನಾಥನೇ, ನೀನು ಹೆಸರುಳ್ಳ ದಾನಿಯೆಂಬುದನ್ನು ಕೇಳಿ ಆಸೆಪಟ್ಟು ಬಂದೆವು. ನಮ್ಮ ಕೋರಿಕೆ ನಿಷ್ಫಲವಾಗದಂತೆ, ನಾವು ಅತಿ ದುಃಖಪಡದಂತೆ, ನಿಟ್ಟುಸಿರು ಬಿಡದಂತೆ ಆಗಲು ನೀನು ನಮ್ಮನ್ನು ಮದುವೆಯಾಗು.'

ಅನಾಮಿಕ ಸತಿಯರ ಮಾತು ಕೇಳುತ್ತಿದ್ದಂತೆ ರಾಜನ ಕೋಪ ಭುಗಿಲೆದ್ದಿತು. ಆರ್ಭಟಿಸುತ್ತ ನುಡಿದನು :

'ನಾವು ಭೂತಾಯಿ ಹುಟ್ಟಿದಂದು ಹುಟ್ಟಿದ ಸೂರ್ಯವಂಶದ ರಾಜರು! ನಮಗೆ ವಂಶದಲ್ಲಿ, ಕೀರ್ತಿಯಲ್ಲಿ, ಭುಜಬಲದಲ್ಲಿ ಸರಿದೊರೆಯೆನಿಸಿ ಕನ್ನಿಕೆಯನ್ನು ಕೊಡುವ ಭೂಪರು ಇಂದಿನ ತನಕ ಹುಟ್ಟಿಲ್ಲ! ಹೀಗಿರುವಾಗ ಹೊಲತಿಯರು ಬಂದು ನಾವು ಸತಿಯರಾಗುತ್ತೇವೆ ಎಂದು ಹೇಳುತ್ತಿರುವರು! ಇದೇನು ಕಾಲಗುಣವೋ, ನಿಂತಿರುವ ನೆಲದ ಗುಣವೋ! ನೋಡು! ನೋಡು!!'

'ಭೂನಾಥನೇ, ಪಾವನ ಕ್ಷೀರವನ್ನು ಕೊಡುವ ಕೆಚ್ಚಲ ಮಾಂಸ ಉತ್ತಮವಾದುದೆ? ಸವಿಯಾದ ಮಧುವನ್ನು ಕೊಡುವ ಜೇನ್ನೊಣ ಉತ್ತಮವಾದುದೆ? ಕಸ್ತೂರಿಯನ್ನು ಕೊಡುವ ಕಸ್ತೂರಿ ಮೃಗದ ನಾಭಿ ಉತ್ತಮವಾದುದೆ? ಉತ್ತಮ ಗುಣಗಳಿರುವುದರಲ್ಲಿ ಯಾವ ಕುಂದೂ ಇರುವುದಿಲ್ಲ! ಅವು ದೇವರಿಗೆ ಸಲ್ಲುವವು!' ಎಂದು ತಮ್ಮ ಕೌಶಲ್ಯ ಪೂರ್ಣವಾದವನ್ನು ಮಂಡಿಸುತ್ತ ಮಾತು ಮುಂದುವರೆಸಿ,

'ರಾಜನೇ ಕೇಳು. ನಮ್ಮಲ್ಲಿ ರೂಪು ಯೌವನಗಳಿರಲು ಕುಲದ ಮಾತೇಕೆ?'

**ಬಚ್ಚಲುದಕಂ ತಿಳಿದಡಾರ ಮೀಹಕ್ಕೆ ಯೋಗ್ಯಂ**

'ಹೌದಹುದು! ಬಚ್ಚಲಿನ ನೀರು ತಿಳಿಯಾದರೆ ಸ್ನಾನಕ್ಕೆ ಯೋಗ್ಯವೆ? ನಾಯ ಮೊಲೆಯಲ್ಲಿ ಹಾಲಿದ್ದರೂ ಕುಡಿಯಲು ಯೋಗ್ಯವೆ? ಪ್ರೇತವನದೊಳಗೆ ಬೆಳೆದ ಹೂ ಮುಡಿಯಲು ಯೋಗ್ಯವೆ? ಹೊಲತಿಯರಾದ ನಿಮ್ಮಲ್ಲಿಯ ಯೌವ್ವನದ ಸೊಕ್ಕು, ರೂಪಿನ ಸೌಂದರ್ಯ, ಜಾಣತನಕ್ಕೆ ಒಲಿದು ರಮಿಸಲಾಗುವುದೆ? ಶಿವ ಶಿವ! ಈ ಮಾತೆ ಹೊಲಸಾದುದು!'

'ರಾಜನ್, ಹಾಡನ್ನು ಕೇಳಿ ಆಲಿಸಿದ ಕಿವಿಗೆ ಹೊಲೆಯಿಲ್ಲ! ಮಾತಾಡಿ ಹೊಗಳಿದ ಬಾಯಿಗೆ ಹೊಲೆಯಿಲ್ಲ! ಸುಂದರ ರೂಪವನ್ನು ನೋಡಿದ ಕಣ್ಣುಗಳಿಗೆ ಹೊಲೆಯಿಲ್ಲ! ಮೈ ಮುಡಿಯಿಂದ ಸುಳಿವ ತಂಗಾಳಿ ತೀಡುವ ಸುಗಂಧವನ್ನು ಆಘ್ರಾಣಿಸಿದ ಮೂಗಿಗೆ ಹೊಲೆಯಿಲ್ಲ! ಆದರೆ ಸೋಂಕುವ ಚರ್ಮಕ್ಕೆ ಹೊಲೆಯುಂಟಾಯಿತೆ? ಪಂಚೇಂದ್ರಿಯಗಳಲ್ಲಿ ನಾಲ್ಕು ಅಧಮ, ಒಂದು ಅಧಿಕವೆ?'

'ನೋಡಿ ತಿಳಿಯುತ್ತವೆ ಕಣ್ಣು. ಆಘ್ರಾಣಿಸಿಕೊಂಡು ವಾಸನೆ ತಿಳಿಯುತ್ತದೆ ಮೂಗು. ಶಬ್ದವನ್ನುಂಡು ತಿಳಿಯುತ್ತವೆ ಕಿವಿಗಳು. ಅದೆಲ್ಲವೂ ದೂರದಿಂದಾಯಿತಲ್ಲದೆ ಮುಟ್ಟಲಿಲ್ಲ. ಕೆಂಡವನ್ನು ಮುಟ್ಟಿದರಷ್ಟೇ ಸುಡುವುದು! ಕೇಳಿದರೆ, ನೋಡಿದರೆ, ಮೂಸಿದರೆ ಸುಡುವುದೆ? ಗೊಡ್ಡು ಮಾತಾಡದೆ ಹೋಗಿ.

'ಏನೇ ಆದರೂ ಉತ್ತಮರು ಅಧಮ ಸತಿಯರನ್ನು ನೋಡಬಾರದು. ತಿಳಿಯದೆ ನೋಡಿದರೆ ಮಾತನಾಡಿಸಬಾರದು. ಹಾಗೂ ಮಾತನಾಡಿದರೆ ಮರ್ಯಾದೆ ಮಾಡಬಾರದು. ಈ ರೀತಿ ನಡೆಯಿದ್ದರೂ ನಾನು ನಿಮ್ಮನ್ನು ಗೌರವಿಸಿ ಬಹುಮಾನವನ್ನು ನೀಡಿದೆನು. ನೀವು ಒಡತಿಯರಾಗಲು ಬಯಸುವುದು ಸರಿಯಲ್ಲ.'

'ನಮ್ಮದು ಶಾಪದಿಂದಾದ ದುಷ್ಕುಲ. ಅದು ಸತ್ಕುಲ ಭೂಪನಾದ ನಿನ್ನ ಸಂಗದಿಂದ ಪರಿಶುದ್ಧವಾಗುವುದೆಂಬ ಅಪೇಕ್ಷೆಯಿಂದ ಬಂದಿದ್ದೇವೆ.'

'ನಿಮಗೋಸ್ಕರ ನನ್ನ ಕುಲವನ್ನು ಕೆಡಿಸಲೇ?'

**ಪಾಪಿಗಳ ಪಾಪಮಂ ತೊಳೆವ ಗಂಗೆಗೆ ಪಾಪಲೇಪವುಂಟಾಯ್ತೆ**

'ಪಾಪಿಗಳ ಪಾಪವನ್ನು ತೊಳೆಯುವ ಗಂಗೆಗೆ ಪಾಪಲೇಪ ಉಂಟೆ? ಹೇಳು ಅರಸ.'

'ಕುಲಧರ್ಮಕ್ಕೆ ಇದು ಉಚಿತವಲ್ಲ. ಕೊಡ ಹಾಲು ಕೆಡಿಸುವುದಕ್ಕೆ ಹುಳಿ ಎಷ್ಟು ಬೇಕು?'

'ಅರಸನೇ, ಮಾತಿಗೆ ಮಾತು ಸರಿಯಲ್ಲ. ನಿನ್ನಯ ಖ್ಯಾತಿ, ಪರಾಕ್ರಮ, ರೂಪು, ಯೌವನ, ಅನುಪಮ ಗುಣ ಗೌರವಗಳಿಗೆ ಮನಸ್ಸು ಒಪ್ಪಿ, ಮರುಳಾಗಿ ಮತಿಗೆಟ್ಟು ಬಂದೆವು. ಒಲಿದು ಬಂದವರನ್ನು ಉಪಚರಿಸುವುದು ನೀತಿಯಲ್ಲವೆ? ನೀನು ನಮಗೆ ಗಂಡನಾಗಲೇ ಬೇಕು! ನಿನಗೆ ಇಷ್ಟವಾದಂತೆ ಮಾಡು! ನಾವು ನಿನ್ನನ್ನು ಬೆನ್ನುಬಿಡದೆ ಹಿಂಬಾಲಿಸುತ್ತೇವೆ.'

'ಬಳಿ ಬಂದು ಮಾಡುವುದೇನು? ನಮ್ಮ ಸೇವೆಯಲ್ಲಿ ಎಷ್ಟು ಜನ ಸೇವಕರಿಲ್ಲ?' ಎಂದು ಹೇಳಿದ ರಾಜನ ಮಾತಿಗೆ ಮಾಯಾ ವನಿತೆಯರು ತಮ್ಮ ಒರಟು ವರ್ತನೆಯನ್ನು ಇನ್ನಷ್ಟು ಕಠೋರವಾಗಿ ಹೀಗೆ ವ್ಯಕ್ತಪಡಿಸಿದರು,

'ನಮ್ಮನ್ನು ಮೆಚ್ಚಿ, ಮರುಳುಗೊಳಿಸಿ ಮತ್ತೆ ಒಪ್ಪುವುದಿಲ್ಲ ಎಂದು ರಾಜ ಹೇಳುತ್ತಿರುವನು ಎಂದು ಚೀರಿ ಮೊರೆಯಿಡುತ್ತ ಇಳೆಯೊಳಗೆಲ್ಲ ಸಾರುತ್ತ, ದೂರುತ್ತ ಬರುತ್ತೇವೆ.'

ಅದನ್ನು ಕೇಳಿ ತಾಳ್ಮೆ ತಪ್ಪಿದ ಹರಿಶ್ಚಂದ್ರನು ಘುಡು ಘುಡಿಸಿ ಎದ್ದು ಚಾವಟಿಯನ್ನು ಸೆಳೆದುಕೊಂಡನು. ಮಂತ್ರಿಯು ಮತ್ತೊಂದು ಚಾವಟಿ ತೆಗೆದುಕೊಂಡನು. ಚಾವಟಿಯಿಂದ ಅವರು ಒಬ್ಬೊಬ್ಬರ ಬೆನ್ನು ಮೇಲೆ ಹೊಡೆದರು. ಆ ಗಾನ ರಾಣಿಯರು ತಪ್ಪಿಸಿಕೊಂಡು ಓಡಲು, ಬಿಡದೆ ಬೆನ್ನಟ್ಟಿ ರಕ್ತ ಹೊಮ್ಮುವಂತೆ ಬಾರಿಸಿ ಹಿಂತಿರುಗಿದರು.

ಆ ಮಾಯಾ ವನಿತೆಯರು ಒರಲುತ್ತ, ನರಳುತ್ತ ವಿಶ್ವಾಮಿತ್ರ ಮುನಿಯ ಕಡೆಗೆ ನಡೆದರು.

ಬಿಚ್ಚಿದ ತಲೆ ಕೂದಲ, ಕಂಬನಿ ಸುರಿಸುತ್ತ ಅಳುವ, ಕಳಚಿ ನೇತಾಡುವ ಉಡುಗೆಗಳ, ಬೆನ್ನೊಡೆದು ಸುರಿವ ರಕ್ತದಿಂದ ಆಗಾಗ್ಗೆ ಹಿಂದಿರುಗಿ ನೋಡುತ್ತಿದ್ದರು. ಬೆದರು ಕಣ್ಣುಗಳಿಂದ ಅವರು ವಿಶ್ವಾಮಿತ್ರ ಮುನಿಯ ಪರ್ಣಶಾಲೆಯ ಬಳಿ ಬಂದು,

'ತಂದೆಯೇ, ರಾಜನು ನಮ್ಮನ್ನು ಯಾರ ಮನೆಯವರೆಂದು ಕೇಳಿದನು. ನಾವು ಎರಡನೆಯ ಪರಮೇಶ್ವರನಂತಿರುವ ವಿಶ್ವಾಮಿತ್ರ ಮುನಿಯ ಮನೆಯವರು ಎಂದು ಹೇಳಿದೆವು. ಅದಕ್ಕೆ ಆ ರಾಜನು ಎದ್ದು ನಿರಪರಾಧಿಯಾದ ನಮ್ಮನ್ನು ಕೈಯ್ಯಾರೆ ಬಡಿದನು' ಎಂದು ದುಃಖದಿಂದ ಹೇಳುತ್ತ, 'ನಮ್ಮನ್ನು ಅಲ್ಲಿಗೆ ಕಳುಹಿಸಿ ಹೊಡೆಸಿದಿರಲ್ಲ' ಎಂದು ನೋವಿನಿಂದ ನರಳಿದರು.

ಆ ಮೊರೆ ಕೇಳಿದ ಮುನಿಯು 'ನನ್ನ ಮನೋರಥ ಈಡೇರಿತು. ಅಳಬೇಡಿ' ಎಂದು ಹೇಳುತ್ತ ಕೋಪಾಟೋಪದಿಂದ ಹೊರಟನು.

# ರಾಜ್ಯ ಸರ್ವಸ್ವ ದಾನ

ವಿಶ್ವಾಮಿತ್ರನು ಬಡಬಾಗ್ನಿ ಜಡೆಯನ್ನು ಧರಿಸಿದಂತೆ, ಸಿಡಿಲು ಹೊಸ ಭಸ್ಮವನ್ನು ಹಚ್ಚಿಕೊಂಡಂತೆ, ಕಾಡ್ಗಿಚ್ಚು ಕೃಷ್ಣಾಜಿನವನ್ನು ಉಟ್ಟಂತೆ, ಪ್ರಳಯಾಗ್ನಿ ತಪವನ್ನು ಹೊತ್ತಂತೆ, ಫಾಲಾಕ್ಷನ ಕೋಪ ಪ್ರಬಲವಾಗಿ ಮುನಿಯಾಯಿತೊ ಎಂಬಂತೆ ಕಂಡನು. ಅವನು ಕಡೆಗಣ್ಣಿನಲ್ಲಿ ಕಿಡಿಕಾರುತ್ತ, ಮೀಸೆಗೂದಲು ಹೊತ್ತಿ ಹೊಗೆಕಾರುವ ರೀತಿ ಬಿರುನುಡಿಯಾಡುತ್ತ ಹರಿಶ್ಚಂದ್ರ ರಾಜನಿದ್ದಲ್ಲಿಗೆ ಬಂದನು.

ಕೋಪರೂಪದ ಮುನಿಯನ್ನು ಕಂಡು ರಾಜನು ತನ್ನ ರಾಣಿ ಚಂದ್ರಮತಿಗೆ,

'ರಾಣಿಯೇ, ಅಗೋ ಅಲ್ಲಿ ನೋಡು! ಗುರುವಿನ ಆಜ್ಞೆಯನ್ನು ಮರೆತು ಮೀರಿದುದರ ಫಲ, ಕಂಡ ದುಃಸ್ವಪ್ನದ ಅರ್ಥ ಮೂರ್ತಿಗೊಂಡು ನಮ್ಮ ಕಡೆಗೆ ಬರುತ್ತಿದೆ! ಮುಂದೇನಾಗುವುದೋ ಫಾಲಾಕ್ಷನೇ ಬಲ್ಲ!' ಎಂದು ಹೇಳಿ, ಮುನಿಯನ್ನು ಸ್ವಾಗತಿಸಿದನು. ಅನರ್ಘ್ಯ ರತ್ನಗಳನ್ನು ಕಾಣಿಕೆಯಾಗಿ ನೀಡಿ, ಪಾದಗಳಿಗೆ ಉದ್ದಂಡ ನಮಸ್ಕಾರ ಮಾಡಿದನು. ಮುನಿಯು ರಾಜನನ್ನು ಒದೆದು, ಸಿಡಿಲನುಡಿಯಿಂದ ಹಂಗಿಸಿದನು.

**ಪರುಷದ ಪ್ರತಿಮೆ ಮುನಿದೊದೆದೊಡಂ ಲೋಹ ಹೊನ್ನಾಗದಿರದೆ**

ಆಗ ರಾಜ ಹರಿಶ್ಚಂದ್ರನು ಯಾವುದೇ ಬಗೆಯಲ್ಲಿ ಕೋಪಗೊಳ್ಳದೆ ವಿನಿಯಪೂರ್ವಕವಾಗಿ,

'ಮುನಿಶ್ರೇಷ್ಠರೇ, ನಾನು ಈ ಹಿಂದೆ ಮಾಡಿರುವ ಸುಕೃತದ, ದೇವತಾ ವಂದನೆಯ, ಮುನಿಜನಗಳ ಪಾದಸೇವೆಯ ಫಲದಿಂದ ಇಂದು ತಮ್ಮ ಪಾದಕಮಲಗಳ ದರ್ಶನವಾಯಿತು. ನಾನು ಕೃತಾರ್ಥನಾದೆನು' ಎಂದು ಹೇಳುತ್ತ ಕೈಮುಗಿದು ತಲೆಬಾಗಿ 'ಸಂಶಯರಹಿತ ಸಂತಸದಲ್ಲಿರುವ ನನ್ನನ್ನು ಒದೆದು ನಿಮ್ಮ ಮೃದು ಪಾದಗಳು ನೊಂದವು ತಂದೆ! ಸ್ಪರ್ಶಮಣಿಯ ಪ್ರತಿಮೆ ಮುನಿದು ಒದೆದರೂ ಲೋಹವು ಹೊನ್ನಾಗದಿರುವುದೆ!'

'ಎಲ್ಲವೋ ರಾಜ, ಪಾದವೊಂದೆ ನಿನ್ನ ಕಾರಣದಿಂದ ನೊಂದಿಲ್ಲ' ಎಂದು ವಿಶ್ವಾಮಿತ್ರನು ಬುಸುಗುಡುತ್ತ ಹೇಳಿದನು, 'ನನ್ನ ಮನಸ್ಸು, ಬುದ್ಧಿ, ಚಿತ್ತಾದಿಕರಣಗಳೆಲ್ಲವೂ ನೊಂದು ಬೆಂದು ತಳಮಳಗೊಂಡಿವೆ. ದುರುಳತನದಿಂದ ಏನೇನು ಮಾಡಬಹುದೊ ಅದೆಲ್ಲವನ್ನು ಮಾಡಿ; ಮತ್ತೆ ಈ ದುಷ್ಟತನದ ಮೋಸಗಾರಿಕೆಯ ಮಾತಾಡುತ್ತಿರುವೆಯಾ?'

'ಸ್ವಾಮಿ ಪೂಜ್ಯರೇ, ನಾನು ಮಾಡಿದ ದುರುಳತನವೇನು?"

'ಈ ತಪೋವನದಲ್ಲಿ ವಾಯು ದೇವನು ಬಿರುಗಾಳಿ ಬೀಸುವುದಿಲ್ಲ. ವರುಣನು ಬಿರುಮಳೆ ಸುರಿಸುವುದಿಲ್ಲ. ಸೂರ್ಯನು ಬಿರುಬಿಸಲು ಸೂಸುವುದಿಲ್ಲ. ಕಾಳ್ಗಿಚ್ಚು ಮೇರೆ ಮೀರಿ ಬರುವುದಿಲ್ಲ. ಜವನಗಿವನ ದೂತರು ಇಲ್ಲಿ ಪ್ರವೇಶಿಸುವುದಿಲ್ಲ. ಹೀಗಿರುವಾಗ ನೀನು ನಮ್ಮನ್ನು ನಿಂದಿಸಿ ಮಾತನಾಡಲು ಇಲ್ಲಿಗೆ ಬಂದು ಬೀಡುಬಿಟ್ಟಿರುವೆ.'

'ತಂದೆಯೇ, ಶಿಷ್ಯನಾದ ನಾನು ಪುಣ್ಯಾರ್ಥವನ್ನು ಪಡೆಯುವ ಆಸೆಯಿಂದ ಗುರುನಿಲಯಕ್ಕೆ ಬಂದಿದ್ದೇನೆ. ಸಾಹಸದ ಮಾತು ನನಗೇಕೆ?'

'ಎಲವೋ ದೊರೆಯೆ, ನಿನ್ನಲ್ಲಿ ವಿನಯದಿಂದ ನುಡಿಯುತ್ತ ಗುರುವಿನ ಸರ್ವಸ್ವವನ್ನೂ ಅಪಹರಣ ಮಾಡುವ ಕಲಿತನವಿದ್ದು; ಪುಣ್ಯವನ್ನು ಪಡೆಯುವ ಶಿಷ್ಯತನವೆಲ್ಲಿದೆ?'

'ಗುರುವೇ, ನನ್ನ ಕಾರಣದಿಂದ ಕೆಟ್ಟುದು ಏನು?'

'ನಾನು ಅರಸುಗಳಿಗೆ ಉಪದೇಶವನ್ನು ಮಾಡಿ ವಸ್ತುಗಳನ್ನು ಸಂಪಾದಿಸುವವನಲ್ಲ. ವೈರವನ್ನು ಬಿಟ್ಟು ಹರುಷದಿಂದಿರುವ ಮೃಗಸಂಕುಲ, ಸರ್ವ ಋತುಗಳಲ್ಲಿ ಫಲ ಬಿಟ್ಟು ಬಾಗುವ ಮರಗಿಡಗಳು, ಎಂದಿಗೂ ಬತ್ತದ ಸರೋವರಗಳೇ ನಮ್ಮ ಸಂಪತ್ತು. ಅದೆಲ್ಲವನ್ನೂ ಇರಿದು, ಮುರಿದು, ಕಡಿದು ನಾಶಪಡಿಸಿದುದು ಸರ್ವಾಪಹರಣವಲ್ಲವೇ? ಇನ್ನೇನು ಆಗಬೇಕು?'

'ಪೂಜ್ಯ ಮುನಿಯೇ, ಬರಿಯ ಸಿಟ್ಟನ್ನಿಟ್ಟುಕೊಂಡು ಮಾತನಾಡಬೇಡಿ. ನಾನು ಇರಿದ ಮೃಗ, ಮುರಿದ ಮರ, ಕುಡಿದ ಕೊಳ ಯಾವುದೆಂದು ತೋರಿಸಿ.'

ತನ್ನನ್ನು ಪ್ರಶ್ನೆ ಮಾಡುವ ನುಡಿ ಕೇಳಿದ ವಿಶ್ವಾಮಿತ್ರನಿಗೆ ಕೋಪ ನೆತ್ತಿಗೇರಿತು. ಘುಡು ಘುಡಿಸುತ್ತ, ಹಿಂದೆ ಯಾವಾಗಲೋ ಬತ್ತಿಹೋದ ಕೊಳವನ್ನು; ಕೊಳೆತು ಮುರಿದ ಮರವನ್ನು; ನೃಪನನ್ನು ಅಲ್ಲಿಗೆ ತಂದ ಗಾಯದ ಹಂದಿಯನ್ನು ತೋರಿಸುತ್ತ ಜರೆದು,

"ನೀನು ಇನ್ನಾವ ನೆವವನ್ನು ಒಡ್ಡುವೆ ಪಾಪಿ' ಎನ್ನುತ್ತ ಕೋಪಮೇರೆಗೊಂಡಂತೆ ಮಾತು ಮುಂದುವರೆಸುತ್ತ 'ಹಿಂದೆ ಸಂಪತ್ತಿನಲ್ಲಿ ಗರ್ವದಿಂದ ಮೆರೆದ ಇಂದ್ರನ ಸಿರಿಯನ್ನು ನೀರಿನಲ್ಲಿ ಅದ್ದಿದ ದೂರ್ವಾಸ ಮುನಿಯಂತೆ ಮಾಡುತ್ತೇನೆ. ನೀನು ಶಿವನ ಹಣೆಗಣ್ಣ ಬೆಂಕಿಯೊಡನೆ ಹಗೆತನ ಬೆಳೆಸಿದಂತೆ– ನನ್ನನ್ನು ವಿರೋಧಿಸಿರುವೆ. ನಿನ್ನ ರಾಜ್ಯವೆಲ್ಲವನ್ನು ಕೊಂದು, ಜನ ಆಕ್ರಂದನದಿಂದ ನರಳುವಂತೆ ಮಾಡಿ, ಸುಟ್ಟು ಬೊಟ್ಟಿಟ್ಟುಕೊಳ್ಳುತ್ತೇನೆ! ನನ್ನನ್ನು ಯಾರೆಂದು ತಿಳಿದಿರುವೆ?'

'ಓ ತೇಜಸ್ವಿ ಋಷಿವರ್ಯನೇ, ಒಲಿದು ಸೃಷ್ಟಿಸುವ, ಪಾಲಿಸುವ, ಕೊಲ್ಲುವ ಸತ್ವ ಸಮರ್ಥ ನೀನು. ನೀನೇ ನನ್ನ ಮೇಲೆ ತಪ್ಪು ಹೊರಿಸಿ ಮೂದಲಿಸಿದರೆ ನಾನು

ಶುದ್ಧನಾಗುವುದಾದರೂ ಹೇಗೆ? ನಿಮ್ಮ ಕರುಣದ ತೊಟ್ಟಿಲಲ್ಲಿ ಆಡುವ ಹಸುಳೆ ನಾನು. ಸರ್ವಾಪರಾಧಿ ನಾನು. ತಂದೆಯಾದ ನೀನು ಕರುಣಿಸು ದಯೆಗೆಡಬೇಡ. ಉದ್ರೇಕಗೊಳ್ಳಬೇಡ' ಎಂದು ಹೇಳುತ್ತ ಮುಗ್ಧಭಾವದ ಮಣಿಮಕುಟಧಾರಿಯಾದ ಹರಿಶ್ಚಂದ್ರನು ವಿಶ್ವಾಮಿತ್ರ ಮುನಿಯ ಪದತಾವರೆಯ ಮೇಲೆ ತಲೆಯಿಟ್ಟು ಪ್ರಾರ್ಥಿಸಿದನು.

'ನೋಡಿ, ವಂದಿಸಿ ಹೋಗಲು ಬಂದ ಶಿಷ್ಯನಿಗೆ ನೀನು ಪ್ರೀತಿಯಿಂದ ಕೃಪೆ ತೋರು.'

'ರಾಜನೇ, ನೀನು ಪ್ರಳಯಾಕಾರದ ಹಾವಿನ ಹುತ್ತಕ್ಕೆ ಕೈ ಹಾಕಿ ಅದರ ಹಲ್ಲನ್ನು ಮುರಿಯಲು ಪ್ರಯತ್ನಿಸಿರುವೆ. ನನ್ನ ಹೊಟ್ಟೆಯಿಂದ ಹುಟ್ಟಿದ ಕನ್ನೆ, ಚೆನ್ನೆ, ಅಬಲೆ ಸುಂದರಿಯರನ್ನು ಸಾಯುವಂತೆ ಸದೆಬಡೆದಿರುವೆ'

'ಹೌದು, ಹೊಡೆದಿರುವೆ. ಹೊಡೆದಿಲ್ಲ ಎಂದು ಹೇಳುತ್ತಿಲ್ಲ'

**ಹಸಿದ ಹುಲಿಯ ಮೀಸೆಯನ್ನು ಹಿಡಿದಲುಗಿ ನೋಡಿದೆ**

'ಸರಿ, ಒಳ್ಳೆಯದಾಯಿತು. ಅನ್ಯರೆಂದು ಬಡಿದೆ ಎಂಬ ಉಪಚಾರದ ಮಾತೇಕೆ? ಮೂಗನ್ನು ಕೊಯ್ದು ಕನ್ನಡಿಯನ್ನು ತೋರಿಸುವಂತೆ ಹೊಡೆದುದಲ್ಲದೆ ಮತ್ತೆ ಬಡಿದೆನೆಂದು ತೀಕ್ಷ್ಣವಾಗಿ ಹೇಳುತ್ತಿರುವೆ. ಈ ಬಗೆಯ ನುಡಿ ಕೇಳಲು ನಾನೇನು ನಿನ್ನ ಹಂಗಿನಲ್ಲಿರುವ ಬಡ ವಸಿಷ್ಠನೆ? ನೀನು ಹಸಿದ ಹುಲಿಯ ಮೀಸೆಯನ್ನು ಹಿಡಿದು ಅಲುಗಿಸಿರುವೆ!'

ತನ್ನ ಕುಲಗುರುವಿನ ಬಗ್ಗೆ ವಿಶ್ವಾಮಿತ್ರ ಮುನಿಯು ಆ ರೀತಿ ಲಘುವಾಗಿ ಹಂಗಿಸಿ ಮಾತಾಡಿದ್ದು ಹರಿಶ್ಚಂದ್ರನಿಗೆ ಸರಿಕಾಣಲಿಲ್ಲ. ತನ್ನ ತೀವ್ರ ಅಸಹನೆಯನ್ನು ವ್ಯಕ್ತಪಡಿಸಲು ಅವನು ಹೀಗೆ ಹೇಳಿದನು.

'ಮುನಿವರ್ಯರೇ, ನಿಮ್ಮ ಮನೆಯವರೆಂದು ಮೊರೆಯಿಟ್ಟ ಕಾರಣ ಕರುಣಿಸಿಬಿಟ್ಟೆನು. ಅಲ್ಲದಿದ್ದರೆ ಕೆಡಹಿ ಮೂಗನ್ನು ಕತ್ತರಿಸಿ ಹೆಂಟೆ ಹೊಡೆಯುವ ದಿಮ್ಮಿಗೆ ಕಟ್ಟಿ ಬಟ್ಟ ಬಯಲಿನಲ್ಲಿ ಎಳೆಸಿಬಿಡುತ್ತಿದ್ದೆನು.'

'ಅಷ್ಟೊಂದು ಶಿಕ್ಷೆ ವಿಧಿಸಲು ಅವರೇನು ಅನ್ಯಾಯ ಮಾಡಿದರು?'

'ಮಹರ್ಷಿ ಚಿತ್ತವಿಟ್ಟು ಕೇಳು. ನನ್ನ ಮೇಲಿರುವ ಶ್ವೇತಚ್ಛತ್ರವನ್ನು ಕೊಡು, ಇಲ್ಲದಿದ್ದರೆ ಗಂಡನಾಗು. ನೀನು ಮದುವೆಯಾಗದಿದ್ದರೆ ಚೀರಾಡುವೆವು. ದೇಶದೆಲ್ಲೆಡೆ ದೂರುತ್ತ ತಿರುಗುವೆವು ಎಂದರು.'

'ನೀನು ಶ್ರೇಷ್ಠದಾನಿಯೆಂದು, ಗೌರವಿಸುವ ರಸಿಕನೆಂದು ತಿಳಿದು ಆಸೆಪಟ್ಟಿದ್ದರಲ್ಲಿ ತಪ್ಪೇನು?'

'ಗುರುವೇ, ಬೆಳ್ಗೊಡೆಯನ್ನು ಕೊಡುವರೆ? ಹೊಲತಿಯರನ್ನು ವಿವಾಹವಾಗುವರೆ?'

'ಅರಸನೇ, ಸಾಧ್ಯವಿಲ್ಲ ಎಂದರೆ ಆಗುತ್ತಿರಲಿಲ್ಲವೆ? ಅದಕ್ಕಾಗಿ ಈ ರೀತಿ ಅವರು ಭಯಪಡುವ ಹಾಗೆ ಹೊಡೆದುದು ಏಕೆ?'

'ವಿನಾಕಾರಣ ದೇಶದಲ್ಲೆಲ್ಲಾ ದೂರುತ್ತ ಸಾಗುವ ಅವರ ದುಷ್ಟತನಕ್ಕೆ ಕೋಪಗೊಂಡೆನು, ಹೊಡೆದನು.'

'ಹೊಡೆದವರ ಕೈಯನ್ನು ಕಡಿಯುವೆ. ನಿನ್ನನ್ನು ನಂಬಿ ಹೆಮ್ಮೆಯಿಂದಿರುವ ದೇಶವನ್ನು ಸುಡುವೆ. ನನ್ನ ಆದೇಶಕ್ಕೆ ಎದುರುಬಂದ ಮುನಿಯನ್ನು ಹಿಮ್ಮೆಟ್ಟಿಸುವೆ. ಆ ಮುನಿಯ ಪರ ವಹಿಸಿ ಯುದ್ಧಕ್ಕೆ ಬರುವ ದೇವತೆಗಳನ್ನು ಕೆಡಹಿ ಕುದಿನೀರಿನಲ್ಲಿ ಅದ್ದುವೆ. ನನ್ನ ಶಕ್ತಿ ಸಾಮರ್ಥ್ಯವೇನೆಂಬುದು ನಿನಗೆ ತಿಳಿಯದೆ? ನನ್ನನ್ನು ಈ ಮೊದಲು ಎದುರಿಸಿ ತೊಡಕಿಗೆ ಒಳಗಾದುದನ್ನು ವಸಿಷ್ಠ ಇನ್ನೂ ನಿನಗೆ ಹೇಳಿಲ್ಲವೆ?'

ವಿಶ್ವಾಮಿತ್ರಮುನಿಯ ರೋಷ ದ್ವೇಷದ ನುಡಿ ಹೇಳಿ ಹರಿಶ್ಚಂದ್ರನು ವ್ಯಂಗ್ಯವಾಗಿ,

'ನೀವು ಹರುಷದಿಂದ ಶಾಂತಿ, ಸತ್ಯ, ಭೂತದಯೆಗಳನ್ನು ಗಳಿಸಿ; ಕ್ರೋಧ, ರೌದ್ರ, ಮಿಥ್ಯಾದಿಗಳನ್ನು ಪರಿಹರಿಸಿಕೊಂಡು ಬ್ರಹ್ಮರ್ಷಿಗಳಾಗಿರುವಿರಿ. ನೀವೇ ಕೋಪಾಗ್ನಿಯಿಂದ ಉರಿದೆದ್ದು ಮುನಿಗಳನ್ನು ಕೊಂದು ಮೂರು ಲೋಕವನ್ನು ಇಲ್ಲವಾಗಿಸಿ, ದೇವತೆಗಳನ್ನು ಧ್ವಂಸಮಾಡುವೆ ಎನ್ನುವಿರಿ. ನಾನು ಈ ಲೋಕದ ರಾಜ ದುರುಳ ಕ್ಷತ್ರಿಯ. ನೀವು ಹಾಗೆ ಮಾಡಬಹುದೆ?' ಎಂದು ಹೇಳಿದನು. ಅವನ ಕುಚೋದ್ಯದ ಚುಚ್ಚು ನುಡಿಗಳನ್ನು ಕೇಳುತ್ತ ವಿಶ್ವಾಮಿತ್ರನು ಕಡುಮುಳಿದು,

'ಕೆಟ್ಟದ್ದನ್ನು ಆಡಿ ನೀನಿನ್ನು ಈ ಧರೆಯಲ್ಲಿ ಅರಸುತನದಿಂದ ಹೇಗಿರುವೆಯೊ ನೋಡುವೆನು. ಅಲ್ಲಿಂದ ನಿನ್ನನ್ನು ಓಡಿಸಿ, ನೀನು ಹೋದಲ್ಲಿ ಹೊಕ್ಕು ಬೆನ್ನಟ್ಟಿ ಗೋಳಾಡಿಸುವೆನು. ನೀನು ಹೇಗೆ ಏಳಿಗೆಯನ್ನು ಹೊಂದುವೆಯೊ ನೋಡುವೆನು' ಎಂದು ಮುನಿ ರೌದ್ರನಾದನು.

**ಮೃಡನ ಹಣೆಗಣ್ಣ ಕಿಡಿಯಿಂ – ಕೌಶಿಕ ಮುನಿದ ಕೋಪಾಗ್ನಿ ಯುಗ್ರವಾಯ್ತು!**

ಈ ಲೋಕದಲ್ಲಿ ಉಗ್ರವಾದುದು ಬೆಂಕಿ. ಬೆಂಕಿಗಿಂತ ಉಗ್ರ ಬಡಬಾನಲ. ಬಡಬಾನಲಕ್ಕಿಂತ ಉಗ್ರ ಪ್ರಳಯಕಾಲದ ಬೆಂಕಿ. ಅದಕ್ಕಿಂತ ಉಗ್ರ ಶಿವನ ಹಣೆಗಣ್ಣು. ಶಿವನ ಹಣೆಗಣ್ಣ ಕಿಡಿಗಿಂತ – ಹರಿಶ್ಚಂದ್ರನೊಡನೆ ಮುನಿದ ಕೌಶಿಕ ಮುನಿಯ ಕೋಪಾಗ್ನಿ ಅತಿ ಉಗ್ರವಾಗಿತ್ತು!

ಅದನ್ನು ಕಂಡ ಹರಿಶ್ಚಂದ್ರ ರಾಜನು ಈ ಕೋಪದ ಕಿಚ್ಚು ಅಧಿಕಗೊಂಡು ಅತಿ ತೀವ್ರತರವಾಗಿ ಕಠಿಣವಾಗುವುದು. ಇದು ಸ್ವಲ್ಪದರಲ್ಲಿ ತಗ್ಗುವುದಿಲ್ಲ. ಈಗ ಗರ್ವಿಸುವುದು ಉಚಿತವಲ್ಲ ಎಂಬ ಅಭಿಪ್ರಾಯಕ್ಕೆ ಬಂದನು. ಅತಿ ಸೌಮ್ಯವಾಗಿ, ವಿನಯದಿಂದ,

'ತಂದೆಯೇ, ತಿಳಿಯದೆ ಅನ್ಯಾಯವನ್ನು ಮಾಡಿದೆ. ಕೋಪಾಗ್ನಿಯನ್ನು ಬಿಡಿ. ಕ್ಷಮಿಸಿ' ಎಂದು ಹೇಳಿ ಸತಿಸುತರೊಡನೆ ಅಡ್ಡಬಿದ್ದು ನಮಸ್ಕರಿಸಿದನು.

ರಾಜನ ವಿನಂತಿಯನ್ನು ಮನ್ನಿಸದೆ ದುಷ್ಟ ಹಿಂಸಕ ಪ್ರವೃತ್ತಿಯ ವಿಶ್ವಾಮಿತ್ರನು ಅವನನ್ನು ಅಣಕಿಸುತ್ತ ಹೇಳಿದನು.

'ಎಲೈ ರಾಜನೇ, ನನ್ನ ತಪೋವನಕ್ಕೆ ಅಂಜದೆ ಅಳುಕದೆ ಬಂದು, ಬೀಡು ಬಿಟ್ಟು ಅನ್ಯಾಯವೆಸಗಿ ಕೆಟ್ಟ ಮಾತಾಡಿರುವೆ. ನನ್ನ ಮಕ್ಕಳನ್ನು ಸಾಯುವಂತೆ ಸದೆಬಡೆದಿರುವೆ. ಈಗ ಕೋಪವನ್ನು ಬಿಡು ತಂದೆ ಎನ್ನುವೆ. ನಿನ್ನ ಗರ್ವಭಂಗ ಮಾಡದೆ ಬಿಡುವುದಿಲ್ಲ.'

'ತಂದೆಯೇ ಕ್ರೂರಿಗಳು, ಅತಿ ಅಧಮರು, ದುರ್ಜನರು, ಧೂರ್ತರಾದವರಿಗೆ ಶರಣು ಎಂದು ಹೇಳಲು ವೈರತ್ವವನ್ನು ಬಿಡುತ್ತಾರೆ. ಸರ್ವಸಂಗ ಪರಿತ್ಯಾಗಿಗಳಾದ ನಿಮ್ಮನ್ನು ಒಂದೇಸಮನೆ ಬೇಡಿಕೊಳ್ಳುತ್ತಿರುವ ನನ್ನ ಮೇಲೆ ನಿಮಗೆ ಸ್ವಲ್ಪವೂ ಕರುಣೆ ಏಕಿಲ್ಲ?'

'ನನ್ನ ಕುಮಾರಿಯರನ್ನು ಮದುವೆಯಾಗು. ಈಗಲೇ ಎಲ್ಲ ವಿರೋಧವನ್ನು ಬಿಡುವೆನು.'

'ಮುನಿವರೇಣ್ಯನೇ, ಅರಸುತನದ ಅತಿಮದದ ಆರ್ಭಟದೊಡನೆ ಮುಂದಾಗುವುದನ್ನು ತಿಳಿಯದೆ ನಿಷ್ಠುರವಾಗಿ ವರ್ತಿಸಿ, ಅಕೃತ್ಯಗಳಲ್ಲಿ ತೊಡಗಿದವರನ್ನು ಶಿಕ್ಷಿಸುವುದು ಸರಿ. ಆದರೆ ನೀವು ನೇರವಾಗಿ ನನ್ನನ್ನು ಕರೆದು ಚಾಂಡಾಲ ಸತಿಯರನ್ನು ವಿವಾಹವಾಗು ಎಂದು ಹೀಗೆ ಆದೇಶಿಸುವುದೇ?ಶಿವ ಶಿವಾ!'

'ಎಲೈ ಅರಸ, ಗುರುವೆಂದು ಶಿವನೆಂದು ನಿಮ್ಮ ಕೃಪೆಯೆಂದು ನೀವು ಇರಿಸಿದಂತೆ ಇದ್ದೇನೆ ಎಂದು ಹೇಳುವೆ. ನೀವು ಹೇಳಿದಂತೆ ನಡೆಯುತ್ತೇನೆ ಎಂದು ಅತಿ ಉತ್ತಮಿಕೆಯ ಮಾತಾಡುವೆ. ಆದರೆ ನಮ್ಮ ಮಾತನ್ನು ಮೀರಿ ನಡೆಯುವೆ. ಇದು ಯಾವ ಸುಜನನ ಲಕ್ಷಣ?'

'ಪೂಜ್ಯರೇ, ನಿಮ್ಮ ಕುವರಿಯರನ್ನು ಮದುವೆಯಾಗು ಎಂದು ನೀವು ಹೇಳಬಹುದೆ? ನಾನು ಅದನ್ನು ಒಪ್ಪಿ ನಡೆಯಬಹುದೆ?'

'ಎಲೈರಾಜ, ಗುರು ಹಲವು ಆಜ್ಞೆಗಳನ್ನು ಮಾಡುತ್ತಾನೆ. ಅದರಲ್ಲಿ ಕೆಲವನ್ನು ಮಾಡುವುದು ಮತ್ತು ಕೆಲವನ್ನು ಮಾಡದೆ ಇರುವುದು ಗುರು ಭಕ್ತಿಯೆ?'

'ದೇವ, ನೀವು ನನ್ನ ಹವಣನ್ನು ಪರೀಕ್ಷಿಸಲು ಸಜ್ಜಾಗಿ ಬಂದಿರುವಿರಿ. ನಿಮ್ಮವನು ನಾನು. ನಿಮ್ಮ ಮನದ ರೀತಿಯನ್ನು ನಾನು ತಿಳಿಯೆನೆ?'

'ರಾಜನೇ, ನಿನ್ನ ಹವಣು ಅರಿಯಲು ಹೀಗೆ ಹೇಳಲಿಲ್ಲ. ಮನಃಪೂರ್ವಕವಾಗಿಯೇ ಹೇಳಿದ್ದೇನೆ. ಯಾವ ಶಂಕೆಗೂ ಒಳಗಾಗದೆ ಇವರನ್ನು ಮದುವೆಯಾಗು.'

'ಉತ್ತಮ ರವಿಕುಲದಲ್ಲಿ ಹುಟ್ಟಿ ಚಾಂಡಲತ್ವವೆತ್ತ ಸತಿಯರಿಗೆ ಆಸೆಪಟ್ಟು ಘೋರ ನರಕಕ್ಕೆ ಹೋಗಲು ಸಿದ್ಧನಿಲ್ಲ. ಇದನ್ನು ಆಜ್ಞೆ ಮಾಡಬೇಡಿ' ಎಂದು ರಾಜನು ಕೈಮುಗಿದು ಕೇಳಿಕೊಂಡನು.

'ಭೂಪಾಲನೇ, ವೇದ ಮಾರ್ಗದಲ್ಲಿ ನಡೆದು, ಹುಸಿಯನ್ನು ಬಿಟ್ಟು, ಮದವನ್ನು ತ್ಯಜಿಸಿ, ಲೋಭವನ್ನು ತೊರೆದರೂ ಅರಸರಿಗೆ ಕೊನೆಗೆ ನರಕ ತಪ್ಪದು. ಇದು ತಿಳಿದು ಇಂದುವದನೆಯ ಸಂಗದಿಂದ ಒದಗುವ ಸುಖವನ್ನು ಅನುಭವಿಸು. ತುಂಬಿದ ಬಂಡಿಗೆ ಮೊರವು ಭಾರವೆ?'

'ಮುನಿನಾಥನೇ, ಗಮನವಿಟ್ಟು ಕೇಳು. ನಾನು ದುರುಳತನದಿಂದ ನಡೆದು, ಅಸತ್ಯವನ್ನು ನುಡಿದು, ಚಂಡಾಲ ಸತಿಯರ ಸಂಗ ಮಾಡಿ, ನಿಷ್ಕಾರಣ ಘೋರ ನರಕದಲ್ಲಿ ಬಿದ್ದು ಹೊರಳುವವನಲ್ಲ' ಎಂದು ಹರಿಶ್ಚಂದ್ರನು ಹೇಳಿ, ಮಾತನ್ನು ಮುಂದುವರೆಸುತ್ತ 'ಮುನಿಗಳಾದ ತಾವು ಶಿವನನ್ನು ಪೂಜಿಸು, ದಾನ ಧರ್ಮವನ್ನು ಮಾಡು, ಬ್ರಾಹ್ಮಣರನ್ನು ಗೌರವಿಸು, ರಾಜ್ಯವನ್ನು ಚೆನ್ನಾಗಿ ಪಾಲಿಸು ಎಂದು ಹೇಳಬೇಕು. ಯಜ್ಞ ಯಾಗಾದಿಗಳನ್ನು ನಡೆಸಲು ಅಗ್ರಹಾರಗಳನ್ನು ಬಿಡು; ಮುನೀಶ್ವರರನ್ನು ಆರಾಧಿಸು, ಅನಾಥರನ್ನು ರಕ್ಷಿಸು ಎಂದು ಆದೇಶಿಸಬೇಕು. ದುಷ್ಟರನ್ನು ನಿಗ್ರಹಿಸು, ಉತ್ತಮ ಕುಲಾಚಾರದಲ್ಲಿ ನಡೆ ಎಂದು ಹೇಳಬೇಕು. ಅದನ್ನು ಬಿಟ್ಟು ನನ್ನ ಕುವರಿಯರ ಕೂಡಿನಡೆ ಎಂದು ಹೇಳುವರೆ? ಮುನಿಪುಂಗವರೇ, ಭಸಿತಧರ ಎಂದರೆ ರುದ್ರನನ್ನು ನಿಂದಿಸಿದಂತಾಯಿತೆ? ಹೊಲೆಗೆರೆಯ ಜಲದ ನಡುವೆ ಬಿಂಬಿಸುವ ರವಿಯನ್ನು ಹೊಲೆಯನೆನ್ನಬಹುದೆ? ಬ್ರಹ್ಮನೊಡನೆ ಸ್ಪರ್ಧೆಗಿಳಿದು ಬೇರೆ ಸಕಲ ಜೀವರಾಶಿಯನ್ನು ಸೃಷ್ಟಿಸಬಲ್ಲ ನೀವು ಆ ಎಲ್ಲ ಜೀವರಲ್ಲಿ ಒಂದಾದವರು. ನೀವು ಹವಣು ಅರಿಯದೆ ಮಾತಾಡಿದಿರಿ.'

'ಓಹ್ ಪ್ರಾಜ್ಞನೇ, ಸಮಸ್ತ ಭೂಮಂಡಲದಲ್ಲಿ ಪ್ರಖ್ಯಾತ ಸೂರ್ಯವಂಶದಲ್ಲಿ ಜನಿಸಿದ ಅತಿ ಶ್ರೇಷ್ಠನೂ, ಕೀರ್ತಿವಂತನೂ, ನಾನಾ ಮುನಿಗಳಿಂದ ವಂದಿತನೂ, ಅಖಿಲ ರಾಜಾಧಿರಾಜನೂ ಆದ ಹರಿಶ್ಚಂದ್ರನು–ವಿಶ್ವಾಮಿತ್ರ ಮುನಿಯ ಸುತೆಯರನ್ನು ವರಿಸಿದನು ಎಂದರೆ, ಅದು ನನಗೆ ಗೌರವವನ್ನು ತಂದು ಕೊಡುತ್ತದೆ. ಅಂತಹ ತೇಜಸ್ಸನ್ನು ನನಗೆ ಒದಗಿಸು ಎಂದು ಕೈ ಮುಗಿದು ಬೇಡುವೆ' ಎಂದು ಹೇಳಿ ಕೌಶಿಕ ಮುನಿಯು ಕೈ ಮುಗಿಯಲು, ರಾಜಹರಿಶ್ಚಂದ್ರನು ಕಿವಿಗಳನ್ನು ಮುಚ್ಚಿಕೊಂಡು ಅವರ ಆ ಬಗೆಯ ಪ್ರಾರ್ಥನೆಯನ್ನು ಕೇಳಲಾಗದು ಎಂಬ ಭಾವದಲ್ಲಿ ಹೀಗೆ ಹೇಳಿದನು.

'ಸರ್ವ ಮುನಿಶ್ರೇಷ್ಠರಿಂದ ಕೈ ಮುಗಿಸಿಕೊಳ್ಳುವ ಕೀರ್ತಿಶಾಲಿಗಳಾದ ನೀವು ನನಗೆ ಕೈ ಮುಗಿದು, ನನ್ನನ್ನು ನರಕಕ್ಕೆ ಕಳುಹಿಸಲು ಪ್ರಯತ್ನಿಸುವಿರಾ?'

'ಅರಸನೇ, ನಿನಗೆ ಕೈ ಮುಗಿದು ನನ್ನ ಹಿರಿತನಕ್ಕೆ ಕುಂದಾದರೂ ಆಗಲಿ. ಇದೊಂದು ಗೌರವವನ್ನು ನನಗೆ ಒದಗಿಸಿಕೊಡು.'

'ಮುನಿ ಶ್ರೇಷ್ಠರೇ, ಎಡಬಿಡದೆ ಕಾಡಿ ಬೇಡುವಿರಾದರೆ ಕೇಳಿ. ನನ್ನ ಸರ್ವ ರಾಜ್ಯವನ್ನಾದರೂ ನಿಮಗೆ ಕೊಡಲು ಒಪ್ಪುವೆನು. ಆದರೆ ನೀವು ಕೇಳಿದ ರೀತಿಯ ಗೌರವವನ್ನು ಕೊಡಲಾಗುವುದಿಲ್ಲ.'

**ತಥಾಸ್ತು ಹಡೆದೆಂ ಹಡೆದೆನವನೀಶರೊಡೆಯ ದಾನಿಗಳರಸ**

'ರಾಜನೇ, ತಥಾಸ್ತು. ರಾಜ್ಯವನ್ನು ಸ್ವೀಕರಿಸಿದೆನು. ಅವನೀಶರ ಒಡೆಯ ದಾನಿಗಳ ಅರಸ, ಸತ್ಯಾಭರಣನೇ ಪಡೆದೆನು' ಎಂದು ವಿಶ್ವಾಮಿತ್ರನು ರಾಜನನ್ನು ಹೊಗಳಿ ಆ ವಿಷಯವನ್ನು ಎಲ್ಲ ಮುನಿಸಂಕುಲ ಸಹಿತ ಘೋಷಿಸಿದನು. ರಾಜಹರಿಶ್ಚಂದ್ರನು ತನ್ನ ರಾಜ್ಯವೆಲ್ಲವನ್ನು ವಿಶ್ವಾಮಿತ್ರ ಮುನಿಗೆ ಧಾರೆ ಎರೆದನೆಂದು ಜಗತ್ತಿಗೆಲ್ಲ ಸಾರಿರಿ ಎಂದು ಹೇಳಿದನು.

**ಕೌಶಿಕನ ಬಲಾತ್ಕಾರಕ್ಕೆ ಬೆರಗಾದವನೀಶ**

ವಿನಯದಿಂದ ರಾಜ್ಯವನ್ನು ನೀಡಿದ ರಾಜನನ್ನು ಮೆರವಣಿಗೆ ಮಾಡದಿದ್ದರೆ ಜನರು ನಗುವರು. ಹಾಗಾಗಿ, ತಪೋವನಕ್ಕೆ ಹೋಗಿ ಗುಡಿತೋರಣವನ್ನು ಕಟ್ಟಿ ಎಂದು ಸೇವಕರನ್ನು ಕೌಶಿಕ ಅಟ್ಟುತ್ತಿದ್ದನು. ಅವನ ಈ ಬಲಾತ್ಕಾರದ ನಡೆಯನ್ನು ಕಂಡು ರಾಜ ಬೆರಗಾದನು! ಮೂಗಿನ ಮೇಲೆ ಬೆರಳಿಟ್ಟುಕೊಂಡು ಗಾಬರಿಯಾಗಿ ವಿಶ್ವಾಮಿತ್ರನಿಗೆ ಈ ಪ್ರಶ್ನೆಯನ್ನು ಕೇಳಿದನು.

'ಜಗತ್ತನ್ನೆಲ್ಲ ಸುತ್ತಿ ಸಾರುವಂತಾಗಲು ನಾನು ಏನನ್ನು ಕೊಟ್ಟಿರುವೆ?'

'ನಿನ್ನಲ್ಲಿ ಇರುವುದೆಲ್ಲವನ್ನು ಸ್ವಲ್ಪವೂ ವಂಚನೆಯಿಲ್ಲದೆ ಕೊಟ್ಟಿರುವೆ. ನಮಗೆ ಸಂತೋಷವಾಗಿದೆ. ಮನಸ್ಸಿನಲ್ಲಿ ನೋಯಬೇಡ.'

'ಮುಖ್ಯವಾಗಿ ಹೇಳಬೇಕೆಂದರೆ, ನಾನು ಏನನ್ನೂ ಕೊಟ್ಟಿಲ್ಲ.'

'ಸಮಸ್ತ ಮುನಿಜನದ ನಡುವೆ–ನನ್ನ ಸರ್ವ ರಾಜ್ಯವನ್ನಾದರೂ ನಿಮಗೆ ಕೊಡುವೆನು. ಆದರೆ ಕೆಟ್ಟ ಗೌರವವನ್ನು ಕೊಡೆನು ಎನ್ನುತ್ತ ಆಕ್ಷೇಪದಿಂದ ನಗುತ್ತ ನುಡಿದೆ. ಈಗ ಕೊಟ್ಟಿಲ್ಲ ಎಂದು ಹೇಳುವೆಯಲ್ಲ?' ಎಂದು ಮೊಂಡುವಾದ ಮಂಡಿಸುತ್ತ ವಿಶ್ವಾಮಿತ್ರನು ನುಡಿದನು 'ನೀನು ನಗುತ್ತ ಕೊಟ್ಟರೆ ನಾನು ನಗುತ್ತ ತೆಗೆದುಕೊಳ್ಳುವೆನು. ಕೊಡುವೆ ಎಂದ ಮೇಲೆ ಕೊಡಬೇಕು ಭೂಪ! ನೀನು ನಿನ್ನ ನುಡಿಗೆ ಭಂಗ ತಂದು ಸುಳ್ಳು ಹೇಳಿದರೂ, ಪಡೆದುದನ್ನು ನಾನು ಹಿಂದಿರುಗಿಸುವುದಿಲ್ಲ.'

'ನೀನು ಸಮರ್ಥ, ಉಗ್ರ, ಪ್ರಚಂಡ ಎಂಬ ಮದದ ಬಲದಿಂದ ಬಲಾತ್ಕಾರವಾಗಿ ನನ್ನ ರಾಜ್ಯವನ್ನು ಕಸಿದುಕೊಳ್ಳುವುದು ಉಚಿತವೆ?'

'ನಿನಗೆ ಅರಸುತನದ ಮೇಲೆ ಇಷ್ಟೊಂದು ವ್ಯಾಮೋಹವಿದ್ದರೆ ನನ್ನ ಮಕ್ಕಳನ್ನು ಮದುವೆಯಾಗು. ಆಗ ನಾನು ಬಳುವಳಿಯಾಗಿ ಈ ಎಲ್ಲ ಸಾಮ್ರಾಜ್ಯವನ್ನು ಮರಳಿ ಕೊಡುವೆನು!'

'ಮುನಿನಾಥನೇ, ಈ ರಾಜ್ಯದೊಡನೆ ನನ್ನ ದೇಹ, ನನ್ನ ಪತ್ನಿ, ಪುತ್ರರು ಕೈತಪ್ಪಿ ಹೋದರೂ ಚಂಡಾಲಸ್ತ್ರೀಯರನ್ನು ವರಿಸುವುದಿಲ್ಲ. ನಿರ್ಮಲ ರವಿ ಕುಲವನ್ನು ನೀರಿನಲ್ಲಿ ಮುಳುಗಿಸುವುದಿಲ್ಲ. ನನ್ನನ್ನು ಮತ್ತೆ ಮತ್ತೆ ಪರೀಕ್ಷಿಸಿ ಪ್ರಯೋಜನವಿಲ್ಲ. ಕೈ ಮುಗಿದು ಕೇಳಿಕೊಳ್ಳುವೆ, ನಿಷ್ಕಾರಣವಾಗಿ ನುಡಿ ನುಡಿದು ಈ ಮನಸ್ಸನ್ನು ಲಘುವಾಗಿಸಬೇಡ.'

'ಎಲವೋ, ತಳದ ಬೇರನ್ನು ಬಲ್ಲವನಿಗೆ ಎಲೆಯನ್ನು ತೋರಿಸಿ ಗುರುತು ಹೇಳುವೆಯ? ನನ್ನ ಕುವರಿಯರನ್ನು ವಿವಾಹವಾಗಿ ಕುಲವನ್ನು ಕೆಡಿಸಲಾರೆ ಎನ್ನುವೆಯ? ನಿನ್ನ ಕುಲದ ದೋಷವನ್ನು ಕೇರಿ ತೂರಿ ತೋರಿಸುವೆ!'

'ಉದ್ಧಟತನದಿಂದ ನನ್ನನ್ನು ಮರುಳು ಮಾಡಿದಂತೆ, ನನ್ನ ಸತ್ಕುಲವನ್ನು ನಿಂದಿಸಿ ದೋಷವನ್ನು ತೋರಿಸಲು ನಿನಗಲ್ಲ, ಶಿವಬ್ರಹ್ಮರಿಗೂ ಸಾಧ್ಯವಿಲ್ಲ!'

'ವಸಿಷ್ಠ ಮುನಿ ಕೋಪಿಸಿಕೊಂಡು ನಿನ್ನ ತಂದೆ ತ್ರಿಶಂಕುವಿಗೆ ಶಾಪ ಕೊಟ್ಟಾಗ ಅವನು ರಾಜ್ಯಭ್ರಷ್ಟನಾಗಿ ಚಾಂಡಾಲತ್ವಕ್ಕೆ ಒಳಗಾಗಿದ್ದ. ಅವನ ಶಾಪ ವಿಮೋಚನೆ ಗೊಳಿಸಿದ ಬಲಾಢ್ಯ ನಾನು. ನನ್ನ ಮಕ್ಕಳನ್ನು ಮದುವೆಯಾದರೆ ಬರುವ ಹೊಲೆ ತೊಳೆಯಲಾರೆನೆ?'

'ಯಾವ ಪಾಪವನ್ನು ಮಾಡದ ನನ್ನ ತಂದೆ ಯಜ್ಞದಲ್ಲಿ ತೊಡಗಿದ್ದಾಗ ಶಾಪವಶದಿಂದ ಲೋಪವಾಯಿತು. ನೀವು ಹೇಳುವ ರೀತಿ ಅಲ್ಲ. ಅನಾಮಿಕ ಸತಿಯರನ್ನು ಕೂಡಿ ಚಂಡಾಲನಾಗಿ ಹೋಗು ಎನ್ನುವುದು ಯಾವ ನೀತಿ? ನಾನು ಇದನ್ನು ಒಪ್ಪುವುದಿಲ್ಲ.'

**ಎನ್ನ ಮಾತಂ ಮೀರಿದೆ ನಿನ್ನ ನೀಪೊತ್ತು ಚಾಂಡಾಲನಂ ಮಾಡದಿನ್ನು ಬಿಡುವೆನೆ ನೋಡು**

'ನನ್ನ ಮಾತನ್ನು ಮೀರಿದೆ. ನಿನ್ನನ್ನು ಈ ಹೊತ್ತಿನಿಂದ ಚಂಡಾಲನನ್ನಾಗಿ ಮಾಡದೆ ಬಿಡುವುದಿಲ್ಲ ನೋಡು! ನೋಡು!!'

ವಿಶ್ವಾಮಿತ್ರನ ಕಟುವರ್ತನೆಯನ್ನು ಕಂಡು ಹರಿಶ್ಚಂದ್ರನು ಏನು ಹೇಳಲು

ಸಾಧ್ಯವಿಲ್ಲದೆ ನಿರಾಶೆಯ ಮಡುವಿಗೆ ಬಿದ್ದಂತಾದನು. ಆದರೂ ತನ್ನ ಖಚಿತ ನಿಲುವನ್ನು ಸ್ಪಷ್ಟಪಡಿಸುತ್ತ ಹೇಳಿದನು,

'ಧರೆ ಮುನಿದು ಕಂಪಿಸಿದರೆ, ಆಕಾಶ ಬಡಿದರೆ, ಉಸಿರು ಒಡಲನ್ನು ಇರಿದರೆ, ಮೊಲೆ ಹಾಲನ್ನು ಕುಡಿದರೆ, ಮಡಕೆಯೆ ಅಡಿಗೆಯನ್ನು ಉಂಡರೆ ಯಾರು ಏನು ಮಾಡಲು ಸಾಧ್ಯ? ಹರಸಿ ರಕ್ಷಿಸಬೇಕಾದ ನೀವು ನನಗೆ ಶಾಪ ಕೊಟ್ಟರೆ, ಇನ್ನು ರಕ್ಷಿಸುವವರು ಯಾರು? ಆ ಮಾತು ಹಾಗಿರಲಿ ರಾಜನು ಅನ್ಯಾಯವನ್ನು ಮಾಡಲು ಒಲ್ಲೆ ಎಂದರೆ ಶಾಪ ಬಂದಿತು – ಎಂಬ ಅಪಕೀರ್ತಿ ಬಂದರೆ ಬರಲಿ.'

'ಹರಿಶ್ಚಂದ್ರನೇ, ನೀನು ಶಾಪ ಅಪಕೀರ್ತಿಗಳನ್ನು ಹೊರುವೆನು ಎಂದಾಗಲೇ ಹುಸಿಗೆ ಹಿಂದೆಗೆಯುವವನಲ್ಲ ಎಂಬುದು ತಿಳಿಯಿತು. ಅಸತ್ಯವನ್ನು ಅರಿಯದ ರವಿಕುಲದಲ್ಲಿ ಕಳೆಮೊಳೆಯುವಂತೆ ನೀನು ಹುಟ್ಟಿರುವೆ! ಇಂದು ನನಗೆ ರಾಜ್ಯವನ್ನು ದಾನವಾಗಿ ಕೊಟ್ಟು, ಮರುಕ್ಷಣವೆ ಕೊಟ್ಟಿಲ್ಲ ಎಂದು ಹೇಳುತ್ತಿರುವೆ! ಇದು ನಿನ್ನ ತಪ್ಪಲ್ಲ! ನಿನ್ನ ಮಾತನ್ನು ನಂಬಿದ ನಮ್ಮದೇ ತಪ್ಪು! ತಿರಿವರಿಗೇಕೆ ರಾಜ್ಯ? ನಿನ್ನ ರೀತಿಯನ್ನು ಚೆನ್ನಾಗಿ ತಿಳಿದೆನು!'

**ನಿನಗೆ ರಾಜ್ಯದ ಮೇಲೆ ಮನವಿನಿತು ಘನವಾದಡಿದೆಕೋ ಮನಃಪೂರ್ವಕ ಕೊಟ್ಟೆನು**

'ಮುನಿ ಶ್ರೇಷ್ಠನೇ, ನನಗೆ ಜಗದ ಅಪಕೀರ್ತಿ ಹುಟ್ಟದು, ಅಸತ್ಯ ನನ್ನನ್ನು ಸೇರದು! ರವಿಕುಲಕ್ಕೆ ಕಳಂಕವೂ ಇರದು! ರಾಜ್ಯದ ಮೇಲೆ ನಿನಗೆ ಅಷ್ಟು ಅತಿಯಾದ ಮನಸ್ಸಿದ್ದರೆ ಇದೋ ಮನಃಪೂರ್ವಕವಾಗಿ ರಾಜ್ಯವನ್ನು ಕೊಟ್ಟೆನು!'

ಹಾಗೆ ನುಡಿದ ಜನಪತಿಯ ಧೈರ್ಯಕ್ಕೆ ವಿಶ್ವಮಿತ್ರನು ಬೆರಗಾದನು!

ತಲೆದೂಗುತ್ತ – ನಾನು ಎಷ್ಟು ಕೋಪಿಸಿಕೊಂಡರೂ, ಎಷ್ಟು ನೋಯಿಸಿದರೂ, ಈ ಹರಿಶ್ಚಂದ್ರ ಸತ್ಯದಿಂದ ಹಿಮ್ಮೆಟ್ಟುತ್ತಿಲ್ಲ. ಈತನನ್ನು ಹೇಗೆ ಸುಳ್ಳು ಹೇಳುವಂತೆ ಮಾಡುವುದು – ಎಂದು ಮನದಲ್ಲಿ ಚಿಂತಿಸುತ್ತ, ಪ್ರಕಟವಾಗಿ ಹೀಗೆ ಹೇಳಿದನು.

'ಹರಿಶ್ಚಂದ್ರನೇ, ಹೀಗೆ ನನ್ನ ಕಾಟಕ್ಕೆ ಬೇಸತ್ತು ನೀನೊಬ್ಬನೇ ನನಗೆ ರಾಜ್ಯವನ್ನು ಕೊಟ್ಟೆ ಎಂದರೆ ನಾನು ಒಪ್ಪುವುದಿಲ್ಲ. ನಿನ್ನ ಪತ್ನಿ ಪುತ್ರ ಮಂತ್ರಿಗಳ ಅಭಿಪ್ರಾಯಕೇಳು.ಅವರನ್ನು ಆದಷ್ಟು ಬೇಗ ಒಪ್ಪಿಸು.'

'ಓಹ್ ಭ್ರಾಂತ ಮುನಿಯೇ, ನಾನೊಬ್ಬನೇ ಸಾಲದೆ? ಸ್ತ್ರೀ ಬಾಲರು ಏನನ್ನಾದರೂ ಹೇಳಬಹುದು. ಇದು ಅವರ ಇಚ್ಛೆಯೇ? ನಾನು ಸಂತೋಷದಿಂದ ಕೊಡುತ್ತಿದ್ದೇನೆ. ಸ್ವೀಕರಿಸಿ.'

'ಹಾಗಿದ್ದರೆ ಧಾರೆಯೆರೆದು ಕೊಡು.'

'ಕಾಡನ್ನು ಮೊಗೆದು ಸುಡುವ ಅಗ್ನಿಗೆ ಆಪೋಶನದ ಗೊಡವೆ ಏಕಯ್ಯ? ಬಲಾತ್ಕಾರದಿಂದ ತೆಗೆದುಕೊಳ್ಳುವಿರಾದರೆ ಧಾರೆ ಏಕಯ್ಯ? ಧಾರೆಯೆರೆದು ಕೊಡದಿದ್ದರೆ ನೀವೇನು ರಾಜ್ಯವನ್ನು ಮರಳಿ ಬಿಟ್ಟುಕೊಡುವಿರೇ ಅಯ್ಯ?'

'ನನ್ನ ಮಕ್ಕಳನ್ನು ಮದುವೆಯಾಗು, ಬಿಟ್ಟುಕೊಡುತ್ತೇನೆ.'

'ಮತ್ತೆ ಮತ್ತೆ ಕೆಟ್ಟ ನುಡಿ ಹೇಳುತ್ತಿರಬೇಡಿ. ಹಿಡಿಯಿರಿ.' ಎಂದು ಹೇಳಿ ಹರಿಶ್ಚಂದ್ರ ಮಹಾರಾಜನು ತನ್ನ ಸರ್ವ ಸಾಮ್ರಾಜ್ಯವನ್ನು ಮುನಿಗೆ ಧಾರೆಯೆರೆದು ನೀಡಲು ಸಿದ್ಧನಾದನು. ತಿರುಗಿ ಮಂತ್ರಿಯ ಮುಖವನ್ನು ನೋಡಿದನು. ಆಗ ರಾಣಿ ಚಂದ್ರಮತಿಯು,

'ಅರಸನೇ, ಪರಮೇಶ್ವರನಂತಿರುವ ಕೌಶಿಕಮುನಿಯು ಬೇಡುತ್ತಿರಲು ಮಂತ್ರಾಲೋಚನೆಗೆ ತೊಡಗುವರೆ? ಹರುಷದಿಂದ ಸಮಸ್ತ ರಾಜ್ಯವನ್ನು ನೀಡಿ' ಎಂದು ಹೇಳಿದಳು.

**ಮನಂ ಶಂಕಿಸದೆ ಸಗ್ಗಳೆಯ ಕರದಲೆತ್ತಿದ ನೆರೆದ ಧಾರೆಯನು ಮುನಿವರಗೆ**

ರಾಜನು ನಿಶ್ಶಂಕ ಮನಸ್ಸಿನಿಂದ ಸಗ್ಗಳೆಯನ್ನು ಕೈಯಲ್ಲಿ ಎತ್ತಿ ವಿಶ್ವಾಮಿತ್ರನಿಗೆ ಧಾರೆ ಎರೆದನು. ಅದನ್ನು ನೋಡಿ ಎಲ್ಲ ಮುನಿವರರು ತಲೆದೂಗಿದರು.

ವಿಶ್ವಾಮಿತ್ರನು 'ಏನೇನನ್ನು ಧಾರೆಯೆರೆದೆ' ಎಂದು ಪ್ರಶ್ನಿಸಲು,

'ಚತುರಂಗಸೇನೆ, ಸಕಲ ಭಂಡಾರ, ರಾಜಧಾನಿ, ಬಿರುದು ಬಾವಲಿ, ಸಪ್ತ ದ್ವೀಪಗಳನ್ನು ಆನಂದದಿಂದ ನೀಡಿದ್ದೇನೆ. ಇನ್ನು ನನ್ನ ಪರಿಶೀಲನೆಯನ್ನು ಬಿಟ್ಟು ಕರುಣಿಸಿ, ಹರಸು' ಎಂದು ಹೇಳಿ ಭೂನಾಥ ಹರಿಶ್ಚಂದ್ರನು ನಮಸ್ಕರಿಸಿ ಬೀಳ್ಕೊಂಡನು.

ಅವನನ್ನು ಅಣಕಿಸುತ್ತ ಮುನಿಯು 'ಹೋಗಯ್ಯ, ಹೋಗು!' ಎಂದು ಹೇಳಿದನು.

**ಹರಣಮಂ ಬೇಡದುಳುಹಿದನು ಲೇಸಾಯ್ತು**

'ಸದ್ಯ ಪ್ರಾಣವನ್ನು ಕೇಳದೆ ಕಳುಹಿಸಿದನು. ಒಳ್ಳೆಯದಾಯಿತು. ಮುನಿ ಕರುಣಿಸಿದ' ಎಂದುಕೊಂಡ ಹರಿಶ್ಚಂದ್ರನು–ತನ್ನ ಪ್ರಾಣ ಇನ್ನೂ ಉಳಿದಿರುವ ಬಗ್ಗೆ ಸಂಶಯ ನಿವಾರಣೆಗೆಂದು ತಲೆ ತಡವಿಕೊಂಡ! ಆಗ ಮತ್ಸರ ಬುದ್ಧಿಯ ಮುನಿಯು 'ಬಂದು ಹೋಗು ಒಂದು ನುಡಿ ಹೇಳುವೆ' ಎಂದು ಕರೆದನು.

ಮತ್ತೆ ಕರೆದಾಗ ಇನ್ನೇನು ಬೇಡಿಕೆಯೊ ಎಂದು ರಾಜನು ಯೋಚಿಸುತ್ತ ಎಚ್ಚರಿಕೆಯಿಂದ ಕೇಳಿದನು.

'ಏನಪ್ಪಣೆ?'

'ಪ್ರೀತಿಯಿಂದ ನೀನೆನಗೆ ಸರ್ವಸ್ವವನ್ನೂ ಧಾರೆಯೆರೆದದ್ದರಲ್ಲಿ ನಿನ್ನ ಆಭರಣಗಳಿವೆ ಅದನ್ನು ಕೊಡು.'

ಆ ನುಡಿ ಕೇಳಿದ ತಕ್ಷಣ ರಾಜನು ಮೌನವಾಗಿ ತನ್ನ ಆಭರಣಗಳನ್ನು ಕಳಚಿ ನೀಡಿದ! ಆಗ ಮುನಿಯು,

'ನಿನ್ನ ಸತಿ, ಸುತ, ಮಂತ್ರಿಗಳ ಆಭರಣಗಳನ್ನೂ ನೀಡು' ಎಂದಾಗ ರಾಜನ ನೆರಳಂತೆ ಮೌನವೇ ಕಣ್ಣಾಗಿ ನಿಂತಿದ್ದ ಅವರು ತಮ್ಮ ಆಭರಣಗಳನ್ನು ಕಳಚಿ ನೀಡಿದರು. ಅಷ್ಟಕ್ಕೆ ತೃಪ್ತನಾಗದ – ಕೋಪ, ಮತ್ಸರ, ದ್ವೇಷದ ನೆಲೆಯಾದ ಕೌಶಿಕನು,

'ನೀವೆಲ್ಲರೂ ಉಟ್ಟ ಉಡಿಗೆಗಳನ್ನು ನೀಡಿ' ಎಂದನು. ಆಗ ರಾಜನು ಉಟ್ಟ ಉಡುಗೆ ನೀಡುವ ರೀತಿ ಹೇಗೆ ಎಂದು ಮನಗುಂದಿ ಚಿಂತಿಸುತ್ತ ನಿಂತಿರಲು ಅದನ್ನು ಕಂಡ ವಿಶ್ವಾಮಿತ್ರನು,

'ರಾಜರು ದಡ್ಡರೆಂಬುದು ನಿಜ. ಇದಕ್ಕೆ ಉಪಾಯವನ್ನು ನಾನು ತೋರುವೆ' ಎಂದು ತನ್ನ ಕಡೆಯವನೊಬ್ಬನು ಉಟ್ಟ ಹಳೆಯದಾದ ಬಟ್ಟೆಯನ್ನು ಈಸಿಕೊಂಡು ನಾಲ್ಕಾಗಿ ಸೀಳಿ– ಶಿವ ಶಿವ! ಕರುಣವಿಲ್ಲದ ಪಾಪಿ, ಅವಿಚಾರಿ ಅವರಿಗೆ ನೀಡಿದನು!

**ಅಳುಕದವರೊಬ್ಬರೊಂದೊಂದನುಟ್ಟು ದಿವ್ಯಾಂಬರವನಿತ್ತಡಲಸದೆ ಕೊಂಡನು.**

ಅವರು ನಾಚದೆ, ಜುಗುಪ್ಸೆಪಡದೆ, ಉಪೇಕ್ಷಿಸದೆ ಒಬ್ಬರೊಬ್ಬರೊಂದೊಂದನ್ನು ಉಟ್ಟು ದಿವ್ಯಾಂಬರವನ್ನು ಮುನಿಗೆ ನೀಡಿದರು! ಅವುಗಳನ್ನು ಅವನು ಬೇಸರಿಸದೆ ತೆಗೆದುಕೊಂಡನು!

ಎಲ್ಲ ತೊಡಿಗೆಗಳನ್ನು ನೀಡಿ, ಹಳೆಯ ಬಟ್ಟೆ ಸುತ್ತಿಕೊಂಡಿದ್ದ ಹರಿಶ್ಚಂದ್ರನು– ಹೊಳೆಯುವ ಕಳೆಗಳನ್ನು ಗಿಡಮರಗಳಿಗೆ ಪ್ರೀತಿಯಿಂದ ದಾನವಾಗಿ ನೀಡಿ ಅಂಬರದಿಂದ ಇಳಿಯುವ ಪವಿತ್ರ ಚಂದ್ರನಂತೆ ಕಂಡನು!

ರಾಜನು ಮುನಿಯ ಕಡೆ ತಿರುಗಿ ಕೈಮುಗಿಯುತ್ತ 'ಸಂತೋಷವಾಯಿತೆ? ಹೋಗಬಹುದೆ ತಂದೆ?' ಎಂದನು.

ಮುನಿಯು ಉದಾಸೀನವಾಗಿ, 'ಹೋಗು' ಎಂದು ಕೈಜಾಡಿಸಿದನು!

ಹರಿಶ್ಚಂದ್ರರಾಜನು ನಾಲ್ಕು ಹೆಜ್ಜೆ ಮುಂದೆ ಸಾಗಿರುವಾಗ, ಮನದಲ್ಲಿ ಏನೋ ಕುಟಿಲವನ್ನೆಣಿಸಿದ ಮುನಿಯು ಮತ್ತೆ ಕೈ ಬೀಸಿ 'ಬಾ' ಎಂದು ಕರೆದನು. ತನ್ನ ಮನಸ್ಸಿನ ಅಳುಕು ತನ್ನನ್ನೇ ಚುಚ್ಚುತ್ತಿರಲು, ಅದನ್ನು ಹೇಳುವುದು ಹೇಗೆ ಎಂದು ಆಲೋಚಿಸುತ್ತ ಕೊನೆಗೆ ಬಾಯ್ತೆರೆದು ಕೇಳಿದನು,

'ಎಲೈ ಹರಿಶ್ಚಂದ್ರ, ನನ್ನ ಮನಸ್ಸಿನಲ್ಲಿರುವ ಒಂದು ವಿಷಯವನ್ನು

ಹೇಳಬೇಕೆಂದಿರುವೆ, ಅದನ್ನು ಆಡಿದರೆ ಕೋಪಿಸಿಕೊಳ್ಳುವೆಯ?'

'ತಂದೆಯೇ, ಈವರೆಗೆ ಏನೇನು ಆಡಿದಿರಿ ಅದಕ್ಕೆ ನಾನು ಮುನಿದೆನೆ? ಅದೇನೆಂದು ಹೇಳಿ.'

'ಬಹು ಸುವರ್ಣಯಾಗ ಮಾಡಿದಂದು ನೀನು ನನಗೆ ದಕ್ಷಿಣೆಯಾಗಿ ಕೊಟ್ಟ ಧನವನ್ನು ಕೊಡು. ದೇಶವನ್ನು ಬಿಟ್ಟು ಹೋಗುವವನು ಯಾವ ಸಾಲವನ್ನು ಹೊತ್ತು ಹೋಗಲಾಗದು; ನಿಲ್ಲಿಸಲಾಗದು. ಅದನ್ನು ಕೊಟ್ಟು ನೀನು ಹೋಗು.'

'ಕ್ರಮ ರೀತಿಗಳನ್ನು ಬಿಟ್ಟ ಮರುಳೆ, ನಿನಗೆ ನೀಡಿದ ದಕ್ಷಿಣೆಯ ಅಲ್ಪ ಧನವನ್ನು ನೀನು ಆಗ ತೆಗೆದುಕೊಂಡು ಹೋಗದೆ ಇರುವುದರಿಂದ ಅದು ಭಂಡಾರದಲ್ಲಿಯೆ ಉಳಿದಿದೆ.'

ರಾಜನ ಆ ಮಾತು ಕೇಳಿದ ಮುನಿ ತನ್ನ ಕೊನೆ ಬೆರಳನ್ನು ಆಡಿಸುತ್ತ ತಲೆದೂಗುತ್ತ ವ್ಯಂಗ್ಯವಾಗಿ, 'ಓಹ್ ಬೇಷ್, ನಿನ್ನ ಮಾತು ಸರಿಯಲ್ಲ! ಭಲಾ ಭಲಾ! ಒಳ್ಳೆಯ ಮಾತನಾಡಿದೆ! ನೆಟ್ಟನೆ ಕೊಟ್ಟು ಈಗ ಗೊಡ್ಡು ಮಾತಾಡುವ ನುಡಿ ಚೆನ್ನಾಯಿತು!' ಎಂದು ಅಬ್ಬರಿಸಿ ನಕ್ಕನು.

'ಕಡೆಗಣಿಸಿ ನಗಲೇಕೆ ತಂದೆ?'

'ಧಾರೆಯೆರೆದು ಕೊಡುವಾಗ ದಕ್ಷಿಣೆಯ ಧನವು ಅದರಲ್ಲಿ ಸೇರಿದೆಯೆಂದು ನೀನು ಹೇಳಿದೆಯಾ?'

**ಹೇರನೊಪ್ಪಿಸಿದವಂಗೆಲ್ಲಿಯದು ಸುಂಕ?**

'ತುಂಬಿದ ಬಂಡಿಯನ್ನು ಒಪ್ಪಿಸಿದವನಿಗೆ ಎಲ್ಲಿಯ ಸುಂಕ?'

'ಸಾಲಿಗನು ಸತ್ತರೂ ಸಾಲ ತೀರುವುದಿಲ್ಲ ಎಂದು ಹೇಳುವರು! ಹಾಗಿರುವಾಗ ಧರಣಿಯ ಒಡೆತನ ಹೋದ ಮಾತ್ರದಿಂದ ಸಾಲವು ಹೋಗುತ್ತದೆಯೆ? ಮೊದಲಿನ ಮಾತಿನಂತೆ ದಕ್ಷಿಣೆಯ ಧನವನ್ನು ಕೊಡು. ಕೊಡಲು ಒಪ್ಪದಿದ್ದರೆ ಈ ಎಲ್ಲವನ್ನು ಮರಳಿ ತೆಗೆದುಕೊ.'

ಹಿಂಸಕ ಮುನಿಯ ನುಡಿಗೆ ಹರಿಶ್ಚಂದ್ರನು ಹೆದರಲಿಲ್ಲ. ಹಿಮ್ಮೆಟ್ಟಲಿಲ್ಲ. ತಲೆ ಬಗ್ಗಿಸಲಿಲ್ಲ. ಕೋಪ ತಿರಸ್ಕಾರಗಳಿಂದ ಸಿಡಿಮಿಡಿಗೊಳ್ಳಲಿಲ್ಲ. ಸಮಚಿತ್ತದಿಂದ ಕೇಳಿಕೊಂಡನು.

'ತಂದೆಯೆ, ಒಂದು ಅವಧಿಯನ್ನು ಕೊಟ್ಟರೆ ಆ ಧನವನ್ನು ತಂದು ಕೊಡುತ್ತೇನೆ.'

'ಹತ್ತು ದಿನ.'

'ಸಾಲದು.'

'ಇಪ್ಪತ್ತು ದಿನ.'

'ಹಣ ದೊರಕದು.'

'ಮೂವತ್ತು ದಿನ.'

'ಆಗದು.'

'ನಲವತ್ತೆಂಟು ದಿನ.'

'ಆಗದು ಎಂದು ಹೇಳಲಾರೆ. ನೀನು ಕೊಡುವ ಅವಧಿ ತುಂಬಾ ಕಡಿಮೆ. ಅಷ್ಟರಲ್ಲಿ ಧನ ಕೊಡುವವರಿಲ್ಲ. ಆದರೂ ಹೇಗಾದರೂ ಗಳಿಸಿ ತಂದು ಕೊಡುತ್ತೇನೆ.'

'ಹಣ ವಸೂಲಿಗಾಗಿ ಒಬ್ಬ ತೆರಕಾರನನ್ನು ನಿನ್ನೊಡನೆ ಕಳುಹಿಸಿಕೊಡುತ್ತೇನೆ. ಅವನಿಗೆ ಧನವೆಲ್ಲವನ್ನು ಕೊಡು. ಕಾಡಿಸದೆ ಬೇಗ ಕಳುಹಿಸುವೆನು ಎಂದು ಪ್ರತಿಜ್ಞೆ ಮಾಡು.'

'ಅವಧಿಗೆ ಮೊದಲು ನಿನ್ನ ಹಣವನ್ನು ಕೊಡದಿದ್ದರೆ ಶಿವಪೂಜೆ ಮಾಡದವನು, ಗುರುವಾಜ್ಞೆ ಉಲ್ಲಂಘಿಸಿದವನು, ಪರಸತಿಯನ್ನು ಬಯಸುವವನು, ಪರರ ಜೀವಕ್ಕೆ ಕೋಪಗೊಳ್ಳುವವನು, ತಾಯಿ ತಂದೆಯನ್ನು ಲಕ್ಷಿಸದವನು, ಕುಲಧರ್ಮಗೆಟ್ಟವನು ಇಳಿದ ನರಕದೊಳಗೆ ಇಳಿಯುವೆನು!'

'ಹರಿಶ್ಚಂದ್ರನೇ, ನಾನು ಆಳುವ ದೇಶದಲ್ಲಿ ಬೇಡದೆ, ಸೇವೆ ಮಾಡದೆ, ಕೃಷಿ ವ್ಯವಸಾಯಗೆಯ್ಯದೆ, ನೆಲೆಸದೆ ಅವಧಿಯೊಳಗೆ ಹೊನ್ನನ್ನು ಪೂರೈಸುವುದು.'

'ಆಗಲಿ.'

'ಸಪ್ತ ದ್ವೀಪವೆಲ್ಲವೂ ನನ್ನದು. ಅದರ ಹೊರಗಿನ ಸ್ಥಳ ಯಾವುದು ತಿಳಿಸು.'

**ಹೇಮಕೂಟಂ ವಾರಣಾಸಿಗಳು ಹೊರಗು**

'ಮುನಿವರ್ಯರೆ, ಹೇಮಕೂಟ ವಾರಣಾಸಿಗಳು ನಿನ್ನ ಆಡಳಿತಕ್ಕೆ ಸೇರಿದವುಗಳಲ್ಲ. ಅವು ಪ್ರಳಯಕ್ಕೆ ಹೊರಗು. ಅಲ್ಲಿ ಕಲಿಕಾಲ ಪ್ರವೇಶಿಸದು. ಯಮನ ಸುಳಿವು ಅಲ್ಲಿಲ್ಲ. ಅವು ಪುಣ್ಯದ ಬೀಡುಗಳು. ಮುಕ್ತಿಯ ಮೂಲಗಳು. ಅವುಗಳಿಗೆ ವಿರೂಪಾಕ್ಷ ವಿಶ್ವೇಶ್ವರರೇ ಒಡೆಯರು. ನಾನು ಹಂಪೆಗೆ ಹೋಗಲು ಸಾಧ್ಯವಿಲ್ಲ. ಕಾಶಿಪುರಕ್ಕೆ ಹೋಗಿ ನಿಮಗೆ ಕೊಡಬೇಕಾದ ಹಣವನ್ನು ಕೊಡುವೆನು. ಶಿವಮೂರ್ತಿ ಸ್ವರೂಪನೆ ಇನ್ನು ಸಂಕಟಪಡಿಸದೆ ಕರುಣಿಸು.'

'ಹೋಗು, ನಮ್ಮ ಧನವನ್ನು ಬೇಗ ತೀರಿಸು' ಎಂದು ಮುನಿ ಹೇಳಲು, ಧೈರ್ಯನಿಧಿ ಭೂಪಾಲನು ಅವನ ಪಾದಗಳಿಗೆ ನಮಸ್ಕರಿಸಿ ಹೊರಟನು.

ಹೆದರದೆ ಹೋಗುವ ರಾಜನ ತೇಜಸ್ಸನ್ನು ಕಂಡು ಕೌಶಿಕನು ಯೋಚನೆಗೆ ಒಳಗಾದನು. ರಾಜನು ಕೊಟ್ಟೆ ಎಂದು ಹೇಳಿ, ಶಪಥಕ್ಕೆ ಒಪ್ಪಿ ಹೊರಟು ಹೋದನು.

ಅವನಲ್ಲಿ ಸುಳ್ಳು ಹುಟ್ಟದು. ನಾನು ಅನಂತಕಾಲ ಕಷ್ಟಪಟ್ಟು ತಪವನ್ನಾಚರಿಸಿ ಪಡೆದ ಪುಣ್ಯವನ್ನು ಕೊಡುವೆನೆಂದು ಹೇಳಿರುವೆನು. ಅದು ಹೋದರೆ ಈ ಮುನಿಗಳು ನನ್ನನ್ನು ತಮ್ಮೊಳಗೆ ಸೇರಿಸುವರೆ? ಎಂದು ತೀವ್ರ ತಳಮಳಕ್ಕೊಳಗಾದನು.

ಉಗ್ರ ತಪಸ್ಸಿಗೆ ಪಂಚಾಗ್ನಿಯುಂಟು. ತಲೆಕೆಳಗಾಗಿ ನಿಲ್ಲುವ ಘೋರ ತಪಸ್ಸಿಗೆ ಉಕ್ಕಿನ ಸೂಜಿಯುಂಟು. ಘೋರ ವ್ರತಾಚರಣೆಗೆ ಒಡಲುಂಟು. ಚಿತ್ತಸ್ಥೈರ್ಯ ಉಂಟು. ಕಡೆಗೆ ಫಲವನ್ನು ಕೊಡುವ ಶಿವನೂ ಉಂಟು. ಆದರೆ ವಸಿಷ್ಠನ ಪ್ರತಿಜ್ಞೆ ಗೆದ್ದುಬಿಡುವುದಲ್ಲ! ಎಂದು ಚಿಂತಿಸಿದನು.

**ಮತ್ತೊಂದುಪಾಯಮಂ ಕಂಡನಾ ನಿಷ್ಕರುಣನು**

ವಸಿಷ್ಠನ ಜೊತೆ ಮಲೆತು, ಸೋತು-ಫಲವನ್ನು ಹೋಗಲಾಡಿಸಿ ಕೊಂಡವನು ಇವನು-ಎಂದು ಮುನೀಶ್ವರರು ನಗದೆ ಇರುವುದಿಲ್ಲ ಎಂದು ಕೌಶಿಕನು ಬಹಳ ನೊಂದುಕೊಂಡನು. ತನ್ನನ್ನು ತಾನು ಕೊಂದುಕೊಳ್ಳಲು ಮನಸ್ಸು ಮಾಡಿದನು. ಮತ್ತೆ ಎಚ್ಚೆತ್ತು – ಮನಸ್ಸಿನಲ್ಲಿ ನೋವುಂಡರೆ ಏನಾಗುತ್ತದೆ; ಇದಕ್ಕೆ ತಕ್ಕನಾದುದನ್ನು ಕಾಣಬೇಕೆಂದು ಚಿಂತಿಸಿದನು.

ಈ ರಾಜನನ್ನು ಅವನ ರಾಜಧಾನಿಗೆ ಕರೆದುಕೊಂಡು ಹೋಗಿ ಅದರ ವೈಭವವನ್ನು ತೋರಿಸುವೆನು. ಆ ಪುರದ ಸೊಗಸು, ಜನದ ಸಿರಿ, ದುರ್ಗದಿಂದ ಶೋಭಿಸುವ ಅರಮನೆ, ಕೇಳಿವನದ ಲತಾಗೃಹ ಅವನ ಚಿತ್ತವನ್ನು ಸೆಳೆಯುವಂತೆ ಮಾಡುವೆನು! ಖಗಮೃಗಾವಳಿಗಳ, ವರಚಿತ್ರಶಾಲೆಗಳ, ಅಂತಃಪುರದ ಸ್ತ್ರೀಯರ, ನಾನಾ ರತ್ನಕೋಶದ ವೈಭವ ಸೊಗಸು ಕಂಡು ಅವನ ಮನಸ್ಸು ತವಕಗೊಳ್ಳಬಹುದು! ಅದನ್ನು ಮಾಡುವೆ ಎಂದು ನಿಶ್ಚಯಿಸಿ.

'ಧರಣೀಶ ಬಂದು ಹೋಗು. ಒಂದು ಮಾತುಂಟು' ಎಂದು ಹರಿಶ್ಚಂದ್ರ ರಾಜನನ್ನು ಪುನಃ ಕರೆದು, 'ನಿನ್ನನ್ನು ನಂಬಿ ರಾಜ್ಯವಾಳುವ ಭರದಲ್ಲಿ ನಾನು ಅಲ್ಲಿಗೆ ಹೋದರೆ; ಮರುಳೆ ನಿನಗೆಲ್ಲಿ ಅರಸುತನ ಎಂದು ಪುರದ ಜನ ಬಾಗಿಲಿಗೆ ಅಬ್ಬರಿಸಿಕೊಂಡು ಬರುವರು. ಕಲ್ಲುಗಳ ಮಳೆ ಸುರಿವರು. ಆದ್ದರಿಂದ ನೀನು ನನ್ನನ್ನು ಕರೆದೊಯ್ದು ಅರಮನೆಯಲ್ಲಿರಿಸು. ಸರ್ವವನ್ನು ಒಪ್ಪಿಸಿ ಹೋಗು' ಎಂದು ಕೇಳಿಕೊಂಡನು. ಅದಕ್ಕೆ ರಾಜನು ಒಪ್ಪಿದನು.

**ಪರರೊಡವೆಯೆನಗಾಗದು**

ಆಗ ವಿಶ್ವಾಮಿತ್ರ ಮುನಿಯು ರಾಜನಿಗೆ ಹೇಳಿದನು,

'ನಡೆ ರಥವನ್ನೇರು.'

'ಒಲ್ಲೆನು.'

'ಏಕೆ?'

'ಪರರ ಒಡವೆ ನನಗೆ ಆಗದು.'

'ಏಕಾಗದು?'

'ನಾನು ಕೊಟ್ಟುಬಿಟ್ಟಿದ್ದೇನೆ.'

'ಕೊಟ್ಟಿದ್ದರೇನು? ಉಪಯೋಗಿಸದಿರಲು ಕಾರಣ?'

'ನಮಗೆ ಪ್ರತಿಗ್ರಹ ಸಲ್ಲದು.'

'ಎಷ್ಟಾದರೂ ರಥ ನಿನ್ನೊಡವೆಯಲ್ಲವೆ?'

'ಅಲ್ಲ, ದಾನವಾಗಿ ಕೊಡುವ ಮೊದಲು ನನ್ನ ಒಡವೆ. ಕೊಟ್ಟ ಬಳಿಕ ನನಗೆಲ್ಲಿಯ ಒಡವೆ?' ಎಂದು ದಾನದ ದೊರೆ ಹರಿಶ್ಚಂದ್ರನು ನುಡಿಯಲು ಕೌಶಿಕನು ಕೇಳಿಕೊಂಡನು,

'ಬೇಡಿಕೊಳ್ಳುವೆನು ರಾಜ.'

'ಬೇಡ, ಬೇಡ. ನಾನು ಮಾಡಿದುದನ್ನು ನಾನು ಕಣ್ಣಾರೆ ನೋಡುವೆನು. ತಂದೆ, ನೀನು ಆಡಂಬರದಲ್ಲಿ ರಥವೇರಿ ಚತುರಂಗಬಲದೊಡನೆ ನಡೆ. ನನ್ನನ್ನು ಕಾಡಿಸಬೇಡ. ಸಾಲವನ್ನು ತೀರಿಸಬೇಕಾದ ಅವಧಿ ಅತ್ಯಲ್ಪವಿದೆ. ನಾನು ತುಂಬಾ ದೂರ ಹೋಗಬೇಕಾಗಿದೆ. ಕಾಲಹರಣ ಮಾಡದಿದ್ದರೆ ಮೇರುವಿನ ತುದಿಗೇರಿಸಿದ ಪುಣ್ಯ ನಿಮ್ಮದಾಗುವುದು' ಎಂದು ಮುನಿಪತಿಗೆ ಕೈ ಮುಗಿದನು. ಆಗ ಆ ಮುನಿಯು ವ್ಯಂಗ್ಯವಾಗಿ,

'ಪ್ರೀತಿಯಿಂದಲ್ಲ. ನೀನು ರಾಜಧಾನಿಗೆ ಬರದೆ ಓಡಿ ಹೋಗುವೆ ಎಂಬ ಸಂದೇಹದಿಂದಾಗಿ ರಥವೇರು ಎಂದೆನು.'

'ಅಯ್ಯ, ನನ್ನ ಮೇಲೆ ಕಾವಲು ಹಾಕಿ.'

'ಕಾವಲಿನ ಸೈನಿಕರು ನಿನ್ನವರೇ ಅಲ್ಲವೆ?'

'ಅಯ್ಯ, ಅವರು ಬೇಡ. ನಿಮ್ಮ ಶಿಷ್ಯರಿಗೆ ಆದೇಶಿಸಿ' ಎಂದು ರಾಜ ನುಡಿಯಲು, ಅದರಂತೆ ಕೌಶಿಕನು ತಪೋವನದ ಮುನಿಗಳನ್ನು ಕರೆದು, ಹರಿಶ್ಚಂದ್ರನಿಗೆ ಕಾವಲಿದ್ದು ಕರೆದುಕೊಂಡು ಬರಲು ಆಜ್ಞಾಪಿಸಿದನು. ರಥವೇರಿ ಚತುರಂಗಬಲದೊಡನೆ ಅಯೋಧ್ಯಾಪುರಕ್ಕೆ ನಡೆದನು.

# ರಾಜ್ಯ ಸಮರ್ಪಣ

ಧರೆ ಬಿರಿಯುವಂತೆ ಭೇದಿಸಿಕೊಂಡು ಹೋಗುವ ನಿಸ್ಸಾಳದ ಅಬ್ಬರವನ್ನು ಕೇಳಿ ರಾಜಧಾನಿ ಅಯೋಧ್ಯಾಪುರದ ಜನರು ತಮ್ಮ ರಾಜ ಹರಿಶ್ಚಂದ್ರ ಬಂದನು ಎಂದು ಕೇರಿಗಳನ್ನು ಸಿಂಗರಿಸಿದರು. ಮನೆ ಮನೆಗಳಲ್ಲಿ ಗುಡಿ ತೋರಣಗಳನ್ನು ಕಟ್ಟಿ ಸಂಭ್ರಮಗೊಂಡರು. ಅವರು ಹರಿಶ್ಚಂದ್ರ ಭೂವರನನ್ನು ಎದುರುಗೊಳ್ಳಲು ಉಲ್ಲಾಸದಿಂದ ಗುಂಪು ಗುಂಪಾಗಿ ನಡೆದರು. ಅವರ ಉತ್ಸಾಹದ ರೀತಿ ಚಂದ್ರೋದಯವನ್ನು ಕಂಡು ಸಮುದ್ರ ಉಕ್ಕೇರಿದಂತಿತ್ತು!

ಮುತ್ತಿದ ಕೊಡೆಗಳು, ಮುಸುಕಿದ ಝಲ್ಲರಿಗಳ ನಡುವೆ ಬೆಳಗುವ ಶ್ವೇತಚ್ಛತ್ರಗಳ ನೆರಳಿನಲ್ಲಿ ತಮ್ಮ ಮಹಾರಾಜ ಹರಿಶ್ಚಂದ್ರನನ್ನು ನೋಡಲು ಪುರದ ಜನರು ಹಿಗ್ಗಿನಲ್ಲಿ ನಡೆದರು. ಮುಖವನ್ನು ಎತ್ತಿ ನಿಲುಕಿ ನೋಡುವ ಕಣ್ಣುಗಳಿಂದ, ಮುಗಿದು ಹೊತ್ತ ಕೈಗಳಿಂದ 'ಅವಧಾರುಜೀಯ' ಎಂಬ ನುಡಿಯೊಡನೆ ಹತ್ತಿರ ಬಂದು–ಗಡ್ಡದ ಮುನಿಯ ಮುಖವನ್ನು ಕಂಡು ಅಚ್ಚರಿಗೊಂಡರು!

ಪುರದ ಜನರು–ನಸುಗುನ್ನಿ ಹೂವನ್ನು ಮುಸುಕಿದ ದುಂಬಿಗಳಂತೆ, ಕಡು ಹಸಿರು ಕಸುಗಾಯಿಯನ್ನು ಅಗಿದ ಗಿಳಿಬಳಗದಂತೆ, ಕಹಿನೆಕ್ಕಿದ ಶಿಶುಗಳಂತೆ, ಕೊರಡನ್ನು ಕದುಕಿ ಕೊಕ್ಕನ್ನು ಗಾಸಿಗೊಳಿಸಿಕೊಂಡ ಕೋಗಿಲೆಗಳಂತಾದರು! ಆಸತ್ತು ಬೇಸತ್ತ ಆ ಜನರು ಅತಿಯಾದ ಸಿಟ್ಟಿನಿಂದ ದಾರಿ ತಪ್ಪಿದ ಕರುತಾಯಿಯನ್ನು ಅರಸುವಂತೆ – ಭೂಪಾಲ ಹರಿಶ್ಚಂದ್ರನನ್ನು ಹುಡುಕಿದರು!

### ಹಗಲೊಗೆದ ಚಂದ್ರಕಳೆಯಂತೆ ಅವನಿಪಂ ಬರೆ

ಹಗಲಿನಲ್ಲಿ ಕಾಣಿಸಿಕೊಂಡ ಚಂದ್ರನ ಕಳೆಯಂತೆ. ಬಿರು ವೈಶಾಖವು ಅಗಿದ ಬನದಂತೆ, ಬಿಸಿಲಲ್ಲಿ ಬಿಸುಟ ಚಿಗುರಿನಂತೆ – ಮುಖ ಕಂದಿ, ಕಳೆಗುಂದಿ, ಮಲಿನ ವಸ್ತ್ರ ಉಟ್ಟು, ಸಂತೋಷವಿಲ್ಲದೆ ಸೊಗಸುಗೆಟ್ಟು ರಾಜನು ಮಗ ರಾಣಿ ಮಂತ್ರಿಸಹಿತ ರಥದ ಹಿಂದೆ ಪರದೇಶಿಯಂತೆ; ಕೌಶಿಕನ ಕಾವಲಿನಲ್ಲಿ ಬರುವುದನ್ನು ಕಂಡು ಜನ ಬೆದರಿದರು! ಕಳವಳಗೊಂಡ ಅವರು ಹತ್ತಿರ ಸಾಗಿ ನಮಸ್ಕಾರ ಮಾಡುತ್ತ 'ಕಾಣಿಕೆಯನ್ನು ಸ್ವೀಕರಿಸು ಭೂ ಭುಜ' ಎಂದು ಕಾಣಿಕೆಗಳನ್ನು ಮುಂದಿಟ್ಟರು.

'ನನಗೆ ಅರಸುತನ ತಪ್ಪಿ ಹೋಗಿ ವಿಶ್ವಾಮಿತ್ರ ಮುನಿಗೆ ಅದು ಸಂದಿದೆ. ಅವರನ್ನು ಕಂಡು ಕಾಣಿಕೆಯನ್ನು ಒಪ್ಪಿಸಿ. ಅನುದಿನವು ಅವರ ಆಜ್ಞೆಯನ್ನು ಪಾಲಿಸಿ.'

'ಅದನ್ನು ನಾವು ಒಪ್ಪುವುದಿಲ್ಲ.'

'ಹಾಗೆ ಹೇಳುವುದು ಪ್ರಜಾಧರ್ಮವಲ್ಲ. ಬನ್ನಿ ಕೌಶಿಕ ಮುನಿಯ ಬಳಿಗೆ' ಎಂದು ಹೇಳಿದ ಹರಿಶ್ಚಂದ್ರ ರಾಜನು ಜನರನ್ನು ಮುನಿಗೆ ಪರಿಚಯಿಸಿ ಕಾಣಿಕೆಗಳನ್ನು ಕೊಡಿಸಿದನು. ಪುರವನ್ನು ಹೊಕ್ಕು ಮೌನದಿಂದ ಜನರನ್ನು ನೋಡುತ್ತ ನಡೆದನು.

ಪುರದ ವನಿತೆಯರು ರಾಜನನ್ನು ನೋಡಲೆಂದು, ಆರತಿ ಎತ್ತಲೆಂದು ಸೇಸೆಯನಿಕ್ಕಲೆಂದು ತಮ್ಮ ಮನೆಯ ಬಾಗಿಲಲ್ಲಿ, ಉಪ್ಪರಿಗೆಯಲ್ಲಿ ನಿಂತಿದ್ದರು. ಅವರಲ್ಲಿ ಕೆಲವರು ತಮ್ಮ ರೂಪು ಮೆರೆದು, ಸೊಬಗು ಪ್ರಕಟವಾಗಲೆಂದು ನವರತ್ನ ಖಚಿತ ಚಿನ್ನದ ಒಡವೆಗಳನ್ನು ಧರಿಸಿ ಉತ್ಸಾಹದ ಬುಗ್ಗೆಯಂತೆ ಕಾದು ನಿಂತಿದ್ದರು. ಅವರು ಭೂಪಾಲ ಹರಿಶ್ಚಂದ್ರನ ಸ್ಥಿತಿಯನ್ನು ಕಂಡು–ಉರಿದು ಹೋದ ಪುಷ್ಪ ಬಾಣಗಳಂತಾದರು!

ಕೌಶಿಕನು ವೇಗವಾಗಿ ನಡೆದು ಅರಮನೆಯನ್ನು ಹೊಕ್ಕನು. ರಾಜ ಹರಿಶ್ಚಂದ್ರನ ಕೈಯನ್ನು ಹಿಡಿದು ಸಿಂಹಾಸನದ ಬಳಿಸಾಗಿ ಅದನ್ನು ತೋರಿಸುತ್ತ ಹೇಳಿದನು.

'ಹರಿಶ್ಚಂದ್ರನೇ, ಈ ಸಿಂಹಾಸನ, ಈ ರಾಜದಾನಿ, ಈ ಕೋಟೆ, ಈ ಆನೆ ಕುದುರೆ ರಥಗಳು. ಈ ಕೋಶವನ್ನು ನೋಡು. ಈ ಪರಿಜನ, ಈ ಪತ್ನಿ ಪುತ್ರ, ಈ ಮಂತ್ರಿ, ಈ ಜನ ಸಂಕಟಕ್ಕೊಳಗಾಗದಂತಿರಲು ನೀನು ಮತ್ತೆ ಅರಸನಾಗಬೇಕಾದರೆ ನನ್ನ ಮಕ್ಕಳನ್ನು ಮದುವೆಯಾಗು. ನಿನ್ನನ್ನು ಕಾಡದೆ ಬಿಟ್ಟು ಹೋಗುವೆ."

**ಹೆತ್ತ ತಾಯಂ ಮಾರಿ ತೊತ್ತ ಕೊಂಬರೆ?**

'ಮುನಿನಾಥನೇ, ಹೆತ್ತ ತಾಯಿಯನ್ನು ಮಾರಿ ದಾಸಿಯನ್ನು ಕೊಳ್ಳುವರೆ? ಮೂಗನ್ನು ಕೊಯ್ಸಿಕೊಂಡು ಕನ್ನಡಿಯನ್ನು ನೋಡುವರೆ? ಮಾಣಿಕ್ಯದ ಒಡವೆಯನ್ನು ಒತ್ತೆಯಿಟ್ಟು ಒಡೆದ ಗಾಜನ್ನು ಹಿಡಿಯುವರೆ? ಕೋಪದಿಂದ ಸತ್ತು ಮದುವೆಯಾಗುವರೆ? ಕಸ್ತೂರಿಯನ್ನು ಸುಟ್ಟು ಅರಳು ಕುರುಕುತ್ತಾರೆಯೇ?

'ಚಿತ್ತೈಸು, ಚಂಡಾಲ ಕನ್ನಿಕೆಯರನ್ನು ಕೂಡಿ ನನ್ನ ಇಪ್ಪತ್ತೊಂದು ಸಂತತಿಯವರನ್ನು ನರಕಕ್ಕೆ ಕಳುಹಿಸಲೆ?'

'ಒಲ್ಲೆ ಎನ್ನಬೇಡ. ಒಳ್ಳೆಯದನ್ನು ಏಕೆ ಒಪ್ಪುವುದಿಲ್ಲ?'

'ನನ್ನಿಂದ ತಪ್ಪಾಗಿಲ್ಲ. ನನ್ನಲ್ಲಿ ತಪ್ಪಿಲ್ಲ.'

'ಹಾಗಾದರೆ ನೀನು ನಿನ್ನ ಪರಿವಾರವನ್ನು ಕರೆಸು. ಅವರೆದುರಿಗೆ ಚತುರಂಗ ಬಲವನ್ನು, ದೇಶ ಕೋಶ, ರಾಜಧಾನಿಯುಳ್ಳ ಕೋಟೆ, ರಾಜ ಮುದ್ರೆ ಮೊದಲಾದುವನ್ನು ನನಗೆ ಒಪ್ಪಿಸಿ ಹೋಗು' ಎಂದು ಮುನಿಯು ಹೇಳಿದನು. ಆ ಮಾತಿಗೆ ರಾಜನು ಮಂತ್ರಿ ಪರಿವಾರವನ್ನು ಕರೆಸಿದನು.

ಅಖಿಲ ಪರಿವಾರವನ್ನು, ಚತುರಂಗಬಲವನ್ನು, ಪುರಜನಗಳನ್ನು ವಿಶ್ವಾಮಿತ್ರನಿಗೆ

ಪರಿಚಯಿಸಿ ಕೊಟ್ಟನು. ಅವರೆಲ್ಲರ ಮುಖ ಬಾಡಿತ್ತು. ಬಾಯಿ ಒಣಗಿತ್ತು. ಕಂಬನಿ ಸುರಿಯುತ್ತಿತ್ತು. ಶರೀರ ದುಗುಡದಿಂದ ಕೂಡಿತ್ತು. ನಿರಾಶೆ ವ್ಯಥೆಯಿಂದ ಮನಸ್ಸು ಮರುಗಿತ್ತು. ಮುದವು ಮಾಸಿತ್ತು.

ಸತ್ಯರ ದೇವನಾದ ಹರಿಶ್ಚಂದ್ರನು ಅರಮನೆಯಲ್ಲಿ ವೀಳೆಯದ, ಆರತಿ ಸಜ್ಜುಗೊಳಿಸುವ, ಚಾಮರ ಬೀಸುವ, ಗಂಧ ತೇಯುವ, ಕನ್ನಡಿ ಕಳಸ ಹಿಡಿಯುವ, ಪಡಿಸಣದ – ಈ ಬಗೆಯ ಹಲವು ಪರಿಚಾರಿಕೆಯಲ್ಲಿ ನಿರತರಾದ ಆಜ್ಞಾಪಾಲಕ ತರುಣಿಯರನ್ನು ವಿಶ್ವಾಮಿತ್ರನಿಗೆ ಒಪ್ಪಿಸಿದನು.

ಭೂನಾಥ ಕಂದರ್ಪನಾದ ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ರತ್ನ ಭಂಡಾರ, ಹೇಮ ಭಂಡಾರ, ನಾಣ್ಯ ಉಗ್ರಾಣ, ಪಟ್ಟೆ ಪೀತಾಂಬರಗಳ ಉಗ್ರಾಣ, ಬೆಳ್ಳಿ ಉಗ್ರಾಣ, ಕಂಚಿನುಗ್ರಾಣ, ಆಯುಧಾಗಾರ, ಸೇನಾ ಸಮೂಹಗಳನ್ನು ತೋರಿಸಿ ಒಪ್ಪಿಸಿಕೊಟ್ಟನು. ಬಿರುದಿನ ಮುದ್ರೆ, ನಗರ, ಅರಮನೆ, ಲೆಕ್ಕದ ಪುಸ್ತಕ ಎಂದು ಹೇಳಿ ಎಲ್ಲವನ್ನು ತೋರಿಸಿ,

'ಸರ್ವಸ್ವವನ್ನು ನೋಡಿಕೊ ಮಹಾಪುರುಷ. ಎಲ್ಲವೂ ನಿಮಗೆ ಸಂದಿರುವುದೆ? ಸಂತೋಷವೆ? ಇನ್ನು ಹೋಗಲು ಕರುಣಿಸಿ ಮುನಿನಾಥ' ಎಂದು ಹೇಳಿ, ನಮಸ್ಕರಿಸಿ ಹೊರಟನು.

### ಮಿಡುಮಿಡನೆ ಮಿಡುಕಿತ್ತು ಪುರಜನವು

ತಮ್ಮಿಂದ ಹೊರಟು ಹೋಗುತ್ತಿರುವ ರಾಜನನ್ನು ಕಂಡು ಪುರಜನರು ಕಂಗೆಟ್ಟು, ಸಂಕಟಕ್ಕೊಳಗಾಗಿ ಹೊಟ್ಟೆ ಹಿಸುಕಿಕೊಂಡರು. ಶಕ್ತಿಗುಂದಿ ನಿಟ್ಟುಸಿರುಬಿಡುತ್ತ, ಕೈನೀಡಿ ಕರೆಯುತ್ತ ಗಟ್ಟಿ ಮೊರೆಯಿಟ್ಟರು.

'ನೇಸರ ಕುಲಜ ರಾಜನೇ, ನಿನ್ನನ್ನೇ ನಂಬಿ ನಚ್ಚಿದ್ದ ನಮ್ಮನ್ನು ಮರೆತೆಯೊ? ತೊರೆದೆಯೊ? ಮಾರಿದೆಯೊ? ಹೇಳು' ಎಂದು ಮಿಡುಮಿಡನೆ ಮಿಡುಕಿದರು. ಆ ಸಮಸ್ತ ಜನರು ತಮ್ಮನ್ನು ರಕ್ಷಿಸಿ, ಎಲ್ಲ ರೀತಿಯಲ್ಲಿಯೂ ಸುಖವಾಗಿರಿಸಿದ್ದ ರಾಜನನ್ನು ನೋಡುತ್ತ; ನೋವನ್ನು ಸಹಿಸಿಕೊಳ್ಳಲಾರದೆ ಕಂಗೆಟ್ಟು,

'ಆನೆಯಿಂದಿಳಿದು ನಡೆಯಲು ಅರಿಯದವನು ಬರಿಗಾಲಿನಲ್ಲಿ ಹೇಗೆ ನಡೆಯುವೆ? ಮೃದುವಾದ ಹಾಸಿಗೆಯಲ್ಲಿ ಮಲಗುವವನು ಕಲ್ಲುಮಣ್ಣಿನ ಬರಿನೆಲದಲ್ಲಿ ಹೇಗೆ ಮಲಗುವೆ? ಬಿಳಿಕೊಡೆಯ ತಂಪಿನಲ್ಲಿ ಬರುವವನು ಬಿಸಿಲನ್ನು ಹೇಗೆ ಸಹಿಸುವೆ? ಪುರದಲ್ಲಿರುವವನು ಕಾಡಿನಲ್ಲಿ ಹೇಗಿರುವೆ? ಸದಾ ಜನರ ಮಧ್ಯದಲ್ಲಿರುವವನು ಏಕಾಕಿಯಾಗಿ ಹೇಗಿರುವೆ? ಹೇಳು, ಹೇಳು' ಎಂದು ಪ್ರಶ್ನಿಸಿ ಮೊರೆಯಿಡುತ್ತಿದ್ದರು. ಅವರು ಅತಿ ದುಃಖದಿಂದ ಮುನಿಯನ್ನು ನೋಡಿ,

'ಎಲ್ಲೈ ನಿಷ್ಕರುಣಿ, ರಾಜಧಾನಿಯಿಂದ ಹೊರಗೆ ಯಾರಾದರೂ ದಾನವನ್ನು ಬೇಡುತ್ತಾರೆಯೆ? ಬೇಸರಪಡದೆ ಕೊಡುವ ಮುಗ್ಧ ರಾಜ ಸಿಕ್ಕಿದನೆಂದು

ಅಜೀರ್ಣವಾಗುವಷ್ಟು ದಾನ ಪಡೆಯುವುದೆ? ಪಾಪಿ! ನಿರ್ದಯಿ! ನೀಚ! ನೀರಸ! ನಿರ್ಗುಣ! ನಮ್ಮನ್ನು ಕೊಂದುಬಿಟ್ಟೆ! ನಮ್ಮ ಒಡಲಿನಲ್ಲಿ ಉರಿಯುವ ಬೇಗೆಯ ಬೆಂಕಿ ನಿನ್ನನ್ನು ಇರಿಯದೇ ಹೇಳು? ವಿಶ್ವಾಮೃತ್ಯುವಾದ ವಿಶ್ವಾಮಿತ್ರನೆ!' ಎಂದು ಗೋಳಿಡುತ್ತ ಕೌಶಿಕನನ್ನು ಶಪಿಸುತ್ತಿದ್ದರು.

**ವ್ರತಕ್ಕೆ ಮುಪ್ಪಾಯ್ತೆ ಮುಪ್ಪಿನೊಳು**

'ಓಹ್ ದುರಾಸೆಯ ಮುನಿಯೇ, ಜಡೆಯನ್ನು ತೊರೆದು ಕಿರೀಟ ಧರಿಸುವೆಯಾ? ನಾರಸೀರೆಯನ್ನು ಬಿಟ್ಟು ರೇಷ್ಮೆವಸ್ತ್ರ ತೊಡುವೆಯಾ? ಗೆಡ್ಡೆ ಗೆಣಸು ತಿನ್ನುವುದನ್ನು ಬಿಟ್ಟು ಭಕ್ಷ್ಯ ಭೋಜ್ಯಗಳನ್ನು ಸೇವಿಸುವೆಯಾ? ದರ್ಬೆಯನ್ನು ಬಿಟ್ಟು ಕೈಯಲ್ಲಿ ಕತ್ತಿ ಹಿಡಿಯುವೆಯಾ? ಅರಣ್ಯವನ್ನು ತೊರೆದು ನಗರವಾಸಿಯಾಗುವೆಯಾ? ಭಸಿತವನ್ನು ಬಿಟ್ಟು ಸುಗಂಧಗಳ ಕಂಪು ಪೂಸಿಕೊಳ್ಳುವೆಯಾ? ಇಂದ್ರಿಯ ನಿಗ್ರಹವನ್ನು ತೊರೆದು ಮಡದಿಯರ ಜಗವನ್ನು ಅರಿತುಕೊಳ್ಳಲು ಬಂದಿರುವೆಯಾ? ನಿನ್ನ ಮುಪ್ಪಿನಲ್ಲಿ ವ್ರತಕ್ಕೂ ಮುಪ್ಪಾಯ್ತೆ?' ಎಂದು ಹಲವು ಬಗೆಯಲ್ಲಿ ಹಂಗಿಸಿದರು.

ಆ ಮುನಿಯನ್ನು ನೋಡುತ್ತಿದ್ದ ಇನ್ನು ಕೆಲವು ಅಯೋಧ್ಯಾನಗರವಾಸಿಗಳು,

'ಕಂಗೆಟ್ಟ ಕಡುಪಾಪಿ ಮೂರ್ಖ ಮುನಿಯೇ, ಮದಿಸಿ ಬೆನ್ನಟ್ಟುವ ಮಹಾ ಅರಿಷಡ್ವರ್ಗಗಳನ್ನು ಗೆಲ್ಲಲು ಆಗದ ನೀನು ವೈರಿಗಳನ್ನು ಹೇಗೆ ಗೆಲ್ಲುವೆ? ಇಂದ್ರಿಯಗಳನ್ನು ಶಾಂತವಾಗಿರಿಸಿಕೊಳ್ಳಲಾರದ ನೀನು ದೇಶವನ್ನು ಹೇಗೆ ಶಾಂತವಾಗಿರಿಸುವೆ? ತಪಸ್ತೇಜದಿಂದ ಪುರುಷಾರ್ಥಕೋಶವನ್ನು ಬಳಸಲು ಅರಿಯದ ನೀನು ಯಾವ ಬಲದಿಂದ ರಾಜ್ಯಕೋಶವನ್ನು ಬಳಸುವೆ?' ಎಂದು ಪ್ರಶ್ನಿಸಿದರು.

**ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ**

ತಮ್ಮ ಪಾಲಕ ಹರಿಶ್ಚಂದ್ರರಾಜ ತಮ್ಮಿಂದ ಅಗಲಿ ಹೋಗುವುದನ್ನು ಸಹಿಸಲಾಗದ ಜನ ತಮ್ಮ ಅಳಲನ್ನು ಹೀಗೆ ತೋಡಿಕೊಂಡರು:

'ಪುರದ ಪುಣ್ಯವು ಪುರುಷರೂಪಿಂದ ಹೋಗುತ್ತಿದೆ! ಆಶ್ರಿತ ಜನರ ರಕ್ಷಣೆಯ ಭಾಗ್ಯವು ಅಡವಿಗೆ ನಡೆಯುತ್ತಿದೆ! ಏಳು ಸಮುದ್ರಗಳಿಂದ ಸುತ್ತುವರೆದ ಧರೆಯ ಸಿರಿಯ ಸೊಬಗು ಅಜ್ಞಾತವಾಸಕ್ಕೆ ಸಾಗುತ್ತಿದೆ! ಅಯ್ಯೋ! ಯಾಚಿಸಿ ಬೇಡುವ ದೀನ ಅನಾಥರ ಆನಂದವು ಅಡಗುತ್ತಿದೆ! ಮುನಿಗಳ ಯಾಗರಕ್ಷಾಬಲವು ಅಳಿಯುತ್ತಿದೆ!'

ಅಯ್ಯೋಧ್ಯಾನಗರದ ಎಲ್ಲ ಜನ ಸಮೂಹದ ಒಕ್ಕೊರಲಿನ ದುಃಖವು ಧರೆಯು ಬಾಯ್ಬಿಟ್ಟಂತೆ, ದಿಕ್ಕುಗಳು ಬಲಗುಂದಿದಂತೆ, ಆಗಸವು ಕಂಬನಿ ಸುರಿಸಿದಂತಿತ್ತು. ಅವರ ದುಃಖಭರಿತ ನೋವಿನ ನುಡಿಯನ್ನು ಆಲಿಸಿದ ರಾಜನು ಅವರನ್ನು

ಸಮಾಧಾನಗೊಳಿಸುತ್ತ ನಗರವನ್ನು ದಾಟಿ ಹೋದನು. ತನ್ನ ಹಿಂದೆಯೇ ಬರುತ್ತಿದ್ದ ವಿಶ್ವಾಮಿತ್ರ ಮುನಿಯನ್ನುದ್ದೇಶಿಸಿ ರಾಜನು,

'ಮುನಿವರ್ಯನೇ, ನಾನು ಹಿಂದೆ ರಾಜ್ಯವನ್ನು ಆಳುವ ಗರ್ವದಲ್ಲಿ ಹೊಲತಿಯರನ್ನು ವಿವಾಹವಾಗಿ ಕುಲವನ್ನು ಕೆಡಿಸಬಾರದು ಎಂಬ ಕಾರಣದಿಂದ ನಿಮ್ಮನ್ನು ನೋಯುವಂತೆ ಮಾತಾಡಿರುವೆನು. ಜರೆದು ಮಾರುತ್ತರ ನೀಡಿರುವೆನು. ಕೆಟ್ಟದಾಗಿ ಮಾತಾಡಿ ನಿಂದಿಸಿರುವೆನು. ನನ್ನಂತಹ ಪಾಪಿ, ಚಂಡಾಲ, ಅಧಮರಿಲ್ಲ. ಸರ್ವಾಪರಾಧವಾಗಿದೆ. ದಯವಿಟ್ಟು ನನ್ನ ಮೇಲೆ ಕರುಣೆ ತೋರಿಸದೆ ಇರಬೇಡಿ' ಎಂದು ಬೇಡಿಕೊಂಡನು.

ಧೈರ್ಯನಿಧಿಯಾದ ಹರಿಶ್ಚಂದ್ರನು ಪ್ರಜೆಗಳನ್ನುದ್ದೇಶಿಸಿ,

'ಎರಡನೇ ಪರಶಿವನಂತಿರುವ ಕೌಶಿಕಮುನಿ ನಿಮಗೆ ರಾಜನಾಗಿರುವುದು ನಿಮ್ಮ ಭಾಗ್ಯ. ನೀವು ಮನಸ್ಸಿನಲ್ಲಿ ಮರುಗಬೇಡಿ, ದುಃಖಿಸಬೇಡಿ, ನೋಯಬೇಡಿ, ಧೃತಿಗೆಡಬೇಡಿ. ನನ್ನನ್ನು ಕಂಡು ಸೇವೆಗೈಯ್ಯುತ್ತಿದ್ದಂತೆ ಮುನಿಯ ಸೇವೆ ಮಾಡಿ. ಅಂಜಿ ನಡೆಯಿರಿ. ವಿನಯದಿಂದ ನುಡಿಯುತ್ತ ಓಲೈಸಿಕೊಂಡಿರಿ' ಎಂದು ಹೇಳುತ್ತ ಮುನಿಯ ಕಡೆ ತಿರುಗಿ,

'ಪೂಜ್ಯರೇ, ಲೋಕವಿಖ್ಯಾತವಾದ ಸೂರ್ಯವಂಶದ ಮೂಲ ದೊರೆ ಇಕ್ಷ್ವಾಕು. ಆತನಿಂದ ವಂಶಾನುಗತವಾಗಿ ರಾಜರುಗಳು ಈ ದೇಶವನ್ನು ಪಾಲಿಸಿಕೊಂಡು ಬಂದಿದ್ದಾರೆ. ಈ ದೇಶದ ಜನ ಇದುವರೆಗೆ ಕಷ್ಟ ಬಡತನವನ್ನು ಕಂಡಿಲ್ಲ. ನೀವು ಇವರನ್ನು ರಕ್ಷಿಸಿ ಪಾಲಿಸಿ ಎಂದು ಕೇಳಿಕೊಳ್ಳುತ್ತೇನೆ. ತಂದೆಯೇ, ನನ್ನೊಡನೆ ಬರುವ ತೆರಕಾರನು ಯಾರು ಎಂಬುದನ್ನು ತಿಳಿಸಿ' ಎಂದು ಪ್ರಾರ್ಥಿಸಿದನು.

ಆಗ ಕೌಶಿಕನು ತನ್ನ ಶಿಷ್ಯವೃಂದವನ್ನು ವೀಕ್ಷಿಸಿ – ಹುಸಿ, ಅಸೂಯೆ, ನೀಚ ವೃತ್ತಿ, ನಿರ್ದಾಕ್ಷಿಣ್ಯ, ನಿಷ್ಕರುಣೆಗಳಲ್ಲಿ ಅಗ್ರಗಣ್ಯನಾದ ನಕ್ಷತ್ರಕನೆಂಬುವವನನ್ನು ಏಕಾಂತವಾಗಿ ಕರೆದನು. ಅವನ ಕೈ ಹಿಡಿದು ಹತ್ತಿರಕ್ಕೆ ಸೆಳೆದುಕೊಂಡು ಕಿವಿಯಲ್ಲಿ ರಾಜನಿಗೆ ಸರಿಯಾಗಿ ಬುದ್ಧಿ ಕಲಿಸಲು ಹೀಗೆ ಹೇಳಿದನು.

**ನುಡಿದವಧಿಯಾಯ್ತೆಂದು ಧರೆಯರಿಯೆ ನೃಪನಂ ಹುಸಿಕನೆನಿಸು**

'ನಕ್ಷತ್ರಕನೇ, ಹರಿಶ್ಚಂದ್ರನು ನಮಗೆ ಕೊಡಬೇಕಾದ ಸಾಲವನ್ನು ಕೊಡಲಿ, ಕೊಡದಿರಲಿ; ಅವನು ಸುಳ್ಳು ಹೇಳುವಂತೆ ಮಾಡು. ಕಾಡಿನ ನಡುವೆ ಇವರನ್ನು ಬಂಧನಕ್ಕೊಳಪಡಿಸು. ಕೆಲವು ದಿನ ಉಪವಾಸ ಬೀಳಿಸು. ಕೆಲವು ದಿನ ನಿನ್ನ ದೇಹದ ಆರೋಗ್ಯ ಸರಿಯಿಲ್ಲವೆಂಬ ನೆಪವೊಡ್ಡಿ ದಾರಿ ತಪ್ಪಿಸಿ ಸುತ್ತಾಡಿಸು. ಎಲ್ಲ ಬಗೆಯ ತೊಂದರೆ ಕೊಡು. ಕೊಟ್ಟ ಅವಧಿ ಆಯ್ತೆಂದು ಜಗತ್ತು ತಿಳಿಯುವಂತೆ ಮಾಡು. ರಾಜನನ್ನು ಸುಳ್ಳುಗಾರನನ್ನಾಗಿಸು.

'ನೀನು ಯಾವುದೇ ರೀತಿಯ ಕರುಣೆ ತೋರಿಸಬೇಡ. ಸಾಲ ತೀರಿಸುವ ಅವಕಾಶ ಕೊಡಬೇಡ. ಎಲ್ಲ ರೀತಿಯ ನಿಗ್ರಹ, ಪ್ರತಿಬಂಧಗಳನ್ನುಂಟು ಮಾಡಿ ಅವನು ನಿರಾಶೆಗೊಳಗಾಗಿ ಆಯಾಸಪಡುವಂತೆ ಮಾಡು. ನೀನು ಗುರುಭಕ್ತನಾದರೆ ಅರಸನ ಪ್ರತಿಜ್ಞೆಯನ್ನು ಕೆಡಿಸು. ಸುಳ್ಳು ಹೇಳುವಂತೆ ಮಾಡು.'

ಗುರು ಕೌಶಿಕನ ಮಾತುಗಳನ್ನು ಕೇಳಿದ ನಕ್ಷತ್ರಕನು ತನ್ನ ಸಂಶಯವನ್ನು ಹೀಗೆ ಪ್ರಕಟಿಸಿದನು.

'ದೇವ, ನನ್ನಿಂದ ಅವನು ಸತ್ಯ ವಿಮುಖನಾಗುವನೆ?'

'ಎಲೈ ನಕ್ಷತ್ರಕ, ನೀನು ಅವನ ಜೊತೆ ಇರು. ನಾನು ಹೇಳಿದ ಹಾಗೆ ಮಾಡು. ನಾನು ಬಿಸಿಲಾಗಿ, ಬಿರುಗಾಳಿಯಾಗಿ, ಕಲ್ಲುನೆಲವಾಗಿ, ವಿಷಮಾಗ್ನಿಯಾಗಿ ಬರುತ್ತೇನೆ. ನಾನಾ ಕ್ರೂರಮೃಗವಾಗಿ ಹೊಮ್ಮಿ, ಘೋರಾರಣ್ಯವಾಗಿ ಗರ್ಜಿಸುತ್ತೇನೆ. ಕವಿಯುವ ಭೂತ ಬೇತಾಳವಾಗಿ ಕಂಗೆಡಿಸುತ್ತೇನೆ. ಹಸಿವು, ನೀರಡಿಕೆ, ನಿದ್ರೆ, ಆಲಸ್ಯಗಳನ್ನುಂಟು ಮಾಡಿ ಅವರನ್ನು ಕಾಡುತ್ತೇನೆ. ಅವನು ಹೊಕ್ಕಲ್ಲಿ ಹೊಕ್ಕು ಕಷ್ಟಕ್ಕೆ ಒಳಪಡಿಸಿ, ಸುಳ್ಳುಗಾರನನ್ನಾಗಿಸುತ್ತೇನೆ' ಎಂದು ಹೇಳುತ್ತ ಮುನಿಯು ಹರಿಶ್ಚಂದ್ರನ ಕಡೆ ತಿರುಗಿ,

'ಎಲೈ ಹರಿಶ್ಚಂದ್ರ, ನಿನ್ನೊಡನೆ ಬರುತ್ತಿರುವ ತೆರಕಾರ ನಕ್ಷತ್ರಕನು ಅತಿ ಅಭಿಮಾನಿ. ಅತಿ ಸುಖವಾಗಿ ಬೆಳೆದವನು. ಈತ ಏನು ಕೇಳಿದರೂ ಕೊಡು. ಈತನಿಗೆ ಸಾಲದ ಹಣವನ್ನು ಕ್ಲುಪ್ತಕಾಲದಲ್ಲಿ ಒದಗಿಸು' ಎಂದು ಹೇಳಿದನು.

ಮುನಿಯ ಚರಣಕ್ಕೆ ರಾಜನು ನಮಸ್ಕರಿಸಿ ಪತ್ನಿ ಪುತ್ರ ಮಂತ್ರಿಯೊಡಗೂಡಿ ತೆರಕಾರನ ಜೊತೆ ಹೊರಟನು. ಅವರನ್ನು ನೋಡಿದ ಪ್ರಜೆಗಳು ದುಃಖಿಸಿ, ಚೀರುತ್ತ ಗೋಳಾಡಿದರು.

**ಎನ್ನ ಸತ್ಯಕ್ಕೆ ಹಿತರಾದವರ್ಗಳಿದ್ದೆಡೆಯೊಳಿದ್ದೆನ್ನ ಲೇಸಂ ಬಯಸುತಿಹುದು**

ಕಣ್ತುಂಬಿದ ಕಂಬನಿಯಲ್ಲಿ ಮುಂದೆ ದಾರಿಕಾಣದೆ ಎಡಹುತ್ತ, ಬೀಳುತ್ತ, ಒರಲುತ್ತ ಬರುತ್ತಿರುವ ಪರಿವಾರವನ್ನು ಕಂಡು ರಾಜನು ಕೈಯೆತ್ತಿ 'ಹೋ, ನಿಲ್ಲಿ!' ಎಂದು ಹೇಳಿ ಅವರನ್ನು ತಡೆದು, 'ನೀವುಗಳು ನನ್ನ ಸತ್ಯಕ್ಕೆ ಹಿತರಾದವರಾಗಿದ್ದರೆ, ನೀವು ಇರುವ ಕಡೆ ಇದ್ದು ಲೇಸನ್ನು ಬಯಸಬೇಕು. ಅದು ಬಿಟ್ಟು, ನನ್ನನ್ನು ಅನುಸರಿಸಿ ಬಂದರೆ ತ್ರಿಶಂಕು ಮಹಾರಾಜನ ಆಣೆ!' ಎಂದು ನುಡಿದನು. ಅದಕ್ಕೆ ಪುರಜನರು ಮಾರ್ನುಡಿದರು.

'ಆಣೆ ಮೀರಿದರೂ, ನಾವು ನಿನ್ನ ಜೊತೆಯೇ ಬರುವವರು,

'ಓ ನನ್ನ ಪ್ರೀತಿಯ ಪ್ರಜೆಗಳೇ, ಇಂದಿನವರೆಗೂ ಅಸತ್ಯವೆಂಬುದು ಅಂಟದಿರುವ ಸೂರ್ಯವಂಶಕ್ಕೆ ಕುಂದನ್ನು ಬಯಸುವಿರಾ? ನಾನೇನಾದರೂ ಅದಕ್ಕೆ ಭಂಗ ತರುವಂತಿದ್ದರೆ ಅದನ್ನು ಕಂಡು ಬೇಡ ಎಂದು ಹೇಳಬೇಕಾದ ನೀವು ಈ ರೀತಿ

ಅಳುವುದೇ? ಬಳಲುವುದೇ? ನನ್ನೊಡನೆ ಬರುವೆನೆಂದು ಹೇಳುವುದೇ? ಒಂದುಕಡೆ ಇದ್ದು ಸಾಲವನ್ನು ತೀರಿಸಿ, ನಿಮ್ಮನ್ನು ಮುದದಿಂದ ಕರೆಸುತ್ತೇನೆ, ಅದುವರೆಗೆ ನೀವು ರಾಜ್ಯದಲ್ಲಿಯೇ ಉಳಿಯಿರಿ. ಮುನಿಯು ಹೇಳಿದ ಕಾರ್ಯವನ್ನು ನಿರ್ವಹಿಸಿ.'

**ನೀಂ ಮರಳಿ ಬಪ್ಪಂದುತನಕ ಕಣ್ಣಲ್ಲಿಯೇ ಜೀವವ ಪಿಡಿದಿಪ್ಪೆವು**

'ಎಳೆಯ ಬೆಳದಿಂಗಳನ್ನು ಕುಡಿದ ಚಕೋರಪಕ್ಷಿಗಳು ಹೇಗೆ ಬಿಸಿಲನ್ನು ಉಣ್ಣಲಾರವೋ ಹಾಗೆ ನೀನು ಬರುವತನಕ ನಿನಗಾಗಿ ಕಾಯುವೆವು. ನೀನು ನಮ್ಮನ್ನು ನಿನ್ನ ಜೊತೆ ಕರೆದೊಯ್ಯದಿದ್ದರೆ ನೀನು ಬರುವತನಕ ಕಣ್ಣಲ್ಲಿಯೇ ಜೀವವನ್ನು ಹಿಡಿದುಕೊಂಡು ಕಾದಿರುತ್ತೇವೆ. ಅನ್ಯರ ಸೇವೆಯನ್ನು ಮಾಡುವುದಿಲ್ಲ.'

'ಓ ನನ್ನ ಆತ್ಮೀಯರೆ, ಕಾಡಬೇಡಿ. ಛಲ ಬೇಡ, ಹಠಮಾರಿಗಳಾಗಬೇಡಿ, ಮೂರ್ಖತ್ವ ಬಿಡಿ ಎಂದು ಎರಡು ಕೈಮುಗಿದು ನಿಮ್ಮನ್ನು ಬೇಡಿಕೊಳ್ಳುವೆ' ಎಂದು ರಾಜನು ಎರಡು ಕೈ ಮೇಲೆತ್ತಿ ಅಯೋಧ್ಯಾಪುರದ ಜನಗಳಿಗೆ ವಿನಂತಿಸಿದನು. ಅದಕ್ಕೆ ಅವರು ಒಪ್ಪಿ,

'ದೊರೆಯೇ, ನಿನ್ನನ್ನು ಬೀಳ್ಕೊಡುತ್ತಿದ್ದೇವೆ. ನಮ್ಮ ಚಿಂತೆ ನಿನಗೆ ಬೇಡ. ನೀನು ಇಷ್ಟಪಟ್ಟ ಕಡೆ ಹೋಗು' ಎಂದು ಹೇಳಿದರು.

ರಾಜನು ದುಃಖ ಹರ್ಷ ಮಿಶ್ರಿತ ಭಾವಲಹರಿಯಲ್ಲಿ ಅವರನ್ನು ನೋಡುತ್ತ ಹೊರಟನು.

ಪ್ರಜೆಗಳು ಸತ್ಯಸಂಧನ ಗುಣಗಳನ್ನು ಕೊಂಡಾಡುತ್ತ, ದುಃಖ ತುಂಬಿದ ಕಣ್ಣುಗಳಿಂದ ಅವನು ದೃಷ್ಟಿ ದೂರವಾಗುವವರೆಗೆ ನೋಡುತ್ತಿದ್ದರು.

# ವನವಾಸಿ ಹರಿಶ್ಚಂದ್ರ

ಜನಪತಿ ಹರಿಶ್ಚಂದ್ರನು ಎಲ್ಲವನ್ನೂ ಮುನಿಗೆ ಕೊಟ್ಟು ಅರಣ್ಯಕ್ಕೆ ನಡೆದಾಗ ಪುರಜನ ಮತ್ತು ಪರಿಜನರ ಸ್ಥಿತಿಯು ತಾಯಿ ತೀರಿದ ಶಿಶುವಿನಂತಾಯಿತು. ಗಿಡದಿಂದ ಕಳಚಿ ಬಿದ್ದ ಹೂವಿನಂತಾಯಿತು. ಸೂರ್ಯನಿಲ್ಲದ ಕಮಲದಂತಾಯಿತು. ಸಂಪತ್ತು ಇಲ್ಲದ ಮನೆಯಂತಾಯಿತು. ಜೀವಹೋದ ಒಡಲಿನಂತಾಯಿತು. ಎಣ್ಣೆಹಿಂಗಿದ ಪ್ರಕಾಶದಂತಾಯಿತು. ನೀರಿಲ್ಲದ ಕೊಳದಂತಾಯಿತು. ಹಣ್ಣುಗಳನ್ನೆಲ್ಲ ಕೆಡವಿದ ಮರದಂತಾಯಿತು.

ಮಂತ್ರಿ ಸುಮತಿಯು ದಾರಿ ತೋರಿಸುತ್ತ ಮುಂದೆ ಸಾಗುತ್ತಿದ್ದನು. ರಾಜನು ಎಡಗಡೆ ಮಗನ ಕೈಹಿಡಿದು, ಹಿಂದೆ ಪತ್ನಿ ಬರುತ್ತಿರಲು ನಡೆದು ಹೋಗುತ್ತಿದ್ದನು. ಭೂಮಿಯ ಒಡೆಯನಾದ ಅವನು ಮುನಿಗೆ ಎಲ್ಲವನ್ನೂ ನೀಡಿ ಒಡೆತನದ ಚಿಂತೆಯಿಂದ ಮುಕ್ತನಾಗಿದ್ದನು! ದಕ್ಷಿಣವನ್ನು ಬಿಟ್ಟು ದಕ್ಷಿಣೆಯ ಹಣ ತೀರಿಸಲು ಉತ್ತರ ದಿಕ್ಕಿಗೆ ನಡೆದನು.

**ನಡೆದನಕಟಕಟ ಭೂಮಿಪಂ ಕಾಲಕ್ಕೆ ಕೈ ಮುಗಿಯುತ**

ಭೂಪಾಲನು ತನ್ನ ಮನಸ್ಸಿನಲ್ಲಿ – ನನ್ನ ಸತ್ಯದ ಕಾರಣ ನನಗೆ ಆಯಾಸವಾಗುತ್ತಿಲ್ಲ! ಆದರೆ ಅತಿ ಚಳಿ, ಗಾಳಿ, ಬಿಸಿಲು, ಹಸಿವೆಗಳನ್ನು ಈ ಮೊದಲು ಕಂಡರಿಯದ ಹೆಂಡತಿ ಮತ್ತು ಮಗ ತೊಂದರೆಗೆ ಈಡಾದರಲ್ಲ! ಅವರಿಗೆ ಮೆಟ್ಟಲು ಪಾದರಕ್ಷೆಯಿಲ್ಲ! ಬೆನ್ನ ಮರೆಮಾಡಲು ವಸ್ತ್ರವಿಲ್ಲ! ಹಸಿದಾಗ ಏನಾದರೂ ಕೊಡಿ ಎಂದು ಕೇಳಿದರೆ ಕೊಳ್ಳಲು ಹಣವಿಲ್ಲ! ನಡೆಯಲಾರೆವು ಎಂದರೆ ನಿಲ್ಲಲು ನೆಲೆಯಿಲ್ಲ! ಎಂದು ಹಲವು ರೀತಿಯಲ್ಲಿ ವಿಷಾದಕ್ಕೊಳಗಾದನು.

ಮುಗ್ಧರಾದ ಲೋಹಿತಾಶ್ವ ಮತ್ತು ಚಂದ್ರಮತಿ ಕಾಡಿನ ಗಿಡಮರಗಳನ್ನು ನೋಡುತ್ತ, ಖಗಮೃಗಗಳನ್ನು ಈಕ್ಷಿಸುತ್ತ, ಬೇಡರ ಗುಂಪನ್ನು ಕಾಣುತ್ತ ಮೊದಮೊದಲು ಕುತುಹೂಲದಿಂದ ನಡೆದರು. ಕ್ರಮೇಣ ಮೇಲೆ ಕವಿವ ಗಾಳಿ, ಬಿಸಿಲ ಬಿಸಿ, ಹಸಿವು ಬಾಯಾರಿಕೆಯನ್ನು ಸೈರಿಸಲಾರದೆ ಬಳಲಿ, ನಡೆಸೋತು ಸಾಗಿದರು.

ರಾಣಿ ಚಂದ್ರಮತಿಯು – ನಡೆಯಲಾರದೆ ಹಿಂದುಳಿದರೆ ಪತಿ ಕೋಪಿಸಿಕೊಳ್ಳುವನು. ತುಸು ವೇಗವಾಗಿ ನಡೆಯಲು ಕಾಲು ಕುಪ್ಪಳಿಸಿ ನೋಯುತ್ತಿವೆ. ನೋವನ್ನು ಮೀರಿ ನಡೆಯೋಣವೆಂದರೆ ಶರೀರದ ಭಾರಕ್ಕೆ ತೊಡೆ ನಡುಗುತ್ತದೆ. ಕುತ್ತಿಗೆ ಕೊರೆದಂತಾಗುತ್ತದೆ – ಹೇಗೆ ಸಾಗುವುದೆಂದು ಖಿನ್ನ ಮನಸ್ಕಳಾದಳು. ಮಡದಿಯ ಬರುವಿಗಾಗಿ ರಾಜ ಮರದಡಿನಿಂತು ಕಾಯುತ್ತಿದ್ದನು.

ಬಾಡಿದ ತುಟಿ, ಆರಿದ ಬಾಯಿ, ಕೆದರಿದ ಮುಂಗುರುಳು, ಬೆವರಿನಿಂದ ತೊನೆದ ಮುಡಿ, ಸೊರಗಿದ ಕಣ್ಣು, ಕಲ್ಲು ಮುಳ್ಳುಗಳೊತ್ತಿ ಬೊಕ್ಕೆಯಾದ ಮೆಲ್ಲಡಿಯಲ್ಲಿ ರಾಣಿ ನಡೆದು ಬರುತ್ತಿದ್ದಳು. ಅವಳನ್ನು ಕಂಡು ಸಪ್ತದ್ವೀಪಾಧಿಪತಿಯಾಗಿದ್ದ ಹರಿಶ್ಚಂದ್ರನು ನಿಟ್ಟುಸಿರುಬಿಟ್ಟನು!

ಮಗನನ್ನು ಅಡಿಗಡಿಗೆ ಎತ್ತಿಕೊಳ್ಳುತ್ತ, ಸೋತು ನಡೆಯುವ ಸತಿಯನ್ನು ಸಮಾಧಾನಪಡಿಸುತ್ತ, ಬಳಲುವ ಮಂತ್ರಿಯನ್ನು ಉಪಚರಿಸುತ್ತ ಸಾಗಿದನು. ಅತಿ ಬಿಸಿಲು, ಕಲ್ಲು ಮುಳ್ಳುಗಳ ದಾರಿ, ಹಸಿವು ಬಾಯಾರಿಕೆಗಳ ಸಂಕಟದಿಂದ ಧಾವತಿಗೊಳ್ಳದೆ ಸಹಿಸಿಕೊಳ್ಳುತ್ತ ಅಕಟಕಟ! ರಾಜನು ಕಾಲಕ್ಕೆ ಕೈ ಮುಗಿಯುತ್ತ ನಡೆದನು!

**ನಾನಾ ಕ್ರೂರಮೃಗವಾಗಿ ಬಂದಡ್ಡಗಟ್ಟಿ ಗರ್ಜಿಸುತ ಮಾಯಾವೇಷದಿಂದೊಡನೆ ಬಂದ ವಿಶ್ವಾಮಿತ್ರನು**

ಹೀಗೆ ಆಯಾಸಗೊಂಡು ಹೋಗುತ್ತಿರುವಾಗ ಚಂದ್ರನನ್ನು ಬೆಂಬಿಡದ ರಾಹುವಿನ ರೀತಿ ತೆರಕಾರ ನಕ್ಷತ್ರಕ ಬಂದು ರಾಜನನ್ನು ಕೂಡಿಕೊಂಡನು. ಅಲ್ಲಿಂದ ಪಾಪಿ ಕೌಶಿಕನು ನೂರ್ಮಡಿ ಬಿಸಿಲ ಬೇಗೆಯನ್ನುಂಟು ಮಾಡಿದನು. ಮುಂದಿನ ದಾರಿಯಲ್ಲಿ ಗಿರಿ ಕಂದರಗಳನ್ನು ಸೃಷ್ಟಿಸಿದನು. ಘೋರ ಮೆಳೆಗಳನ್ನು, ಖಗಮೃಗಗಳನ್ನು ನಿರ್ಮಿಸಿದನು. ಅವರು ನಡೆಯುವ ದಾರಿಯಲ್ಲಿ ಒಡ್ಡುಕಲ್ಲುಗಳನ್ನು ಒಡೆದಿಟ್ಟು ಮುಳ್ಳನ್ನೊಟ್ಟಿದನು. ಹಸಿವು ಬಾಯಾರಿಕೆ ಹೆಚ್ಚುವಂತೆ ಝಳವನ್ನುಂಟುಮಾಡಿ ಗಾಸಿಪಡಿಸಿದನು. ಅವರ ಎದುರಿಗಿರುವ ನೀರನ್ನೆಲ್ಲ ಇಲ್ಲದಂತೆ ಮಾಡಿದ ಮುನಿಯು, ಮಾಯಾವೇಷದಿಂದ ಮೃಗವಾಗಿ ಗರ್ಜಿಸುತ್ತ ಅವರಿಗೆ ಅಡ್ಡ ಬಂದನು!

ಆ ಸುಖಿ ಜೀವಿಗಳು ಮೆಳೆಗಳಲ್ಲಿ ಬಾಗಿ, ಮರಗಳಲ್ಲಿ ಹೊರಳಿ, ಇರುಕು ಜಾಡಿನಲ್ಲಿ ಸುತ್ತಿ, ಪೊದರುಗಳಲ್ಲಿ ಎಚ್ಚರಿಕೆಯಿಂದ ಸಾಗಿದರು. ಎತ್ತರ ತಗ್ಗುಗಳಲ್ಲಿ ಏರಿಳಿದು ಬೆಂಡಾದರು. ಮುನಿಯು ಅವರನ್ನು ಉಗ್ರ ಬೇಗೆಯ ಕಿಚ್ಚಿಗೆ ಸಿಕ್ಕಿಸಿ ಬಳಲಿಸಿದನು. ನೆಲ ಕಾಸಿದೊಲೆಯಂತಾಗಿ ಕಾಲಿಡಲು ಆಗದಂತೆ ಮಾಡಿದನು. ನೆಳಲು ಇರುವ ಕಡೆ ಮುಳ್ಳು ಮೆತ್ತಿಕೊಂಡಿದ್ದವು. ದೈವವು ಕಡೆಗಣಿಸಿದ ಬಳಿಕ ರವಿವಂಶಸ್ಥನಾಗಿದ್ದರೂ; ರವಿಗೆ ಆ ಹೊತ್ತಿನಲ್ಲಿ ಹರಿಶ್ಚಂದ್ರನು ಅನ್ಯನಾಗಿ ತೋರಿದನು!

ಹರಿಶ್ಚಂದ್ರನು – ಬಸವಳಿದು ಮಾತನಾಡಲು ಆಗದ ಪತ್ನಿಯನ್ನು ಸಂತೈಸುತ್ತ, ಹಸಿದು ಅಳುವ ಮಗನಿಗೆ ಹಣ್ಣುಗಳನ್ನು ತಂದುಕೊಡುವೆನೆಂದು ಸಮಾಧಾನ ಪಡಿಸುತ್ತಿದ್ದನು. ಆಗ ನಕ್ಷತ್ರಕನು ಮಾರಿಯಂತೆ ಬಂದು ಹೇಳಿದನು. 'ಬಿಸಿಲು ಒಡೆದು ಒಡಲು ಉರಿಯುತ್ತಿದೆ. ನನಗೆ ಆಹಾರ ಒದಗಿಸು.'

'ಈ ದಟ್ಟಡವಿಯಲ್ಲಿ ಆಹಾರವನ್ನು ಎಲ್ಲಿ ತರಲಿ? ಮುಂದೆ ಯಾವುದಾದರೂ ಊರು ಸಿಕ್ಕಾಗ ಹೇಗಾದರೂ ಗಳಿಸಿ ತರುವೆನು'

'ನೀನು ಆಹಾರ ಕೊಡದಿದ್ದರೆ ಇಲ್ಲಿಂದ ಅಲುಗಾಡಲು ಬಿಡುವುದಿಲ್ಲ' ಎಂದು ಹೇಳಿದ ನಕ್ಷತ್ರಕನು ಅವರನ್ನು ಮಧ್ಯಾಹ್ನದ ಉರಿಬಿಸಿಲಿನಲ್ಲಿ ಬೆಂದ ಬಂಡೆಯ ಮೇಲೆ ನಿಲ್ಲಿಸಿ ಶಿಕ್ಷಿಸಿದನು.

ಪ್ರಖ್ಯಾತವಾದ ನನ್ನ ಕುಲದಲ್ಲಿ ಹುಟ್ಟಿ ಸಾರ್ವಭೌಮನಾಗಿ ಮೆರೆದು ಕೀರ್ತಿವಂತನಾದವನು ಹರಿಶ್ಚಂದ್ರ. ಅವನನ್ನು ಕೌಶಿಕನ ಕಾಟದಿಂದ, ಈ ರೀತಿಯ ಬಂಧನದಿಂದ ಬಿಡುಗಡೆಗೊಳಿಸಲಾರದೆ ಹೋದೆನಲ್ಲಾ ಎಂಬ ಚಿಂತೆಯಲ್ಲಿ ಸೂರ್ಯನು ಪಶ್ಚಿಮಾಂಬುದಿಯಲ್ಲಿ ಮುಳುಗಿದನು. ದೇಶದ ದುಗುಡ, ಚಿಂತೆಗಳು ಕವಿದಂತೆ ಕಾಳಗತ್ತಲೆ ಕವಿಯಿತು.

ಭೂವರನು ಚಿಂತಿಸುತ್ತ ನಟ್ಟಡವಿಯಲ್ಲಿ ಏನು ಮಾಡುತ್ತಿರುವನೋ ಎಂಬುದನ್ನು ನೋಡಬೇಕೆಂಬ ಹಂಬಲದಿಂದ–ಗಗನವು ಕಣ್ಣುಗಳನ್ನು ಪಡೆಯಿತೋ ಎಂಬಂತೆ ನಕ್ಷತ್ರಗಳು ಮೂಡಿಬಂದವು! ರಾಜನ ಪತ್ನಿ ಪುತ್ರರು ಕತ್ತಲೆಗೆ ಅಂಜುವರೆಂದು ನಿಶಾದೇವಿಯು ಹೊತ್ತಿಸಿದ ದೊಡ್ಡ ದೀವಿಗೆಯಂತೆ ಚಂದ್ರನು ಪ್ರಕಾಶಿಸಿದನು.

**ಕಾಡಿಗೆಯ ಸೋನೆಮಳೆ ಸುರಿದುದು**

ವಿಶ್ವಾಮಿತ್ರನು ಮೂಡಿದ ಚಂದ್ರಮನಿಗೆ ಮರೆಯಾಗುವಂತೆ ಮೋಡವನ್ನು ಸೃಷ್ಟಿಸಿದನು. ಕತ್ತಲೆಗೆ ಕೈಬೀಸಲು– ನಡು ಕಾಡಿನೊಳಗೆ ಕಾಡಿಗೆಯು ಸೋನೆಮಳೆ ಸುರಿಸಿತು! ಆಗ ಅಲ್ಲಿದ್ದವರು ತಾವು ಇರುವೆವೆಂಬುದನ್ನು ತಮ್ಮನ್ನು ತಾವು ಮುಟ್ಟಿನೋಡಿ ತಿಳಿಯಬೇಕಾಗಿತ್ತು! ಹಾಗೆ ಕಾಳಗತ್ತಲೆ ಕವಿದು ಕಡಲಿಟ್ಟಿತು!

ಹರಿಶ್ಚಂದ್ರನು ಅರಮನೆಯ ಉಪ್ಪರಿಗೆಯಲ್ಲಿ ಮರಿಹಂಸದ ತುಪ್ಪಳದ ಹಾಸಿಗೆಯ ಮೇಲೆ ಮಲಗಿ, ದಿಕ್ಕು ದಿಕ್ಕುಗಳಲ್ಲಿ ಹೊಳೆಯುವ ಮಣಿ ಖಚಿತ ಸಾಲಭಂಜಿಕೆಗಳ ಬೆಳಕಿನಲ್ಲಿ ಸುಖದ ಸುಗ್ಗಿಯಲ್ಲಿದ್ದವನು! ಅಂತಹವನು ದಟ್ಟಡವಿಯ ಕಗ್ಗತ್ತಲೆಯಲ್ಲಿ ತಗ್ಗುನೆಲದ ಮೊಳೆಕಲ್ಲು, ಮುಳ್ಳಿನ ಮೇಲೆ ಹೊದೆಯಲೇನೂ ಇಲ್ಲದೆ ಹಿಮವನ್ನು ಅಪ್ಪಿಕೊಂಡಿದ್ದನು!

ಎಡಬಲದಲ್ಲಿ ಒರಗಿದ ಸತಿಸುತರನ್ನು ತಡಹುತ್ತಿದ್ದನು. ಮಲಗಿರುವ ಮಂತ್ರಿಯನ್ನು ಮಾತನಾಡಿಸಿದರೆ ದನಿ ಕೇಳಿ ಶರಭ ಶಾರ್ದೂಲಗಳು ಬಂದು ಬಿಗಿಯುತ್ತವೆ. ಆಗ ನಾನು ಮುನಿಗೆ ಕೊಡಬೇಕಾದುದನ್ನು ಸಲ್ಲಿಸಲಾಗದೆ ಅಸತ್ಯನಾಗುವೆ ಎಂಬ ಚಿಂತೆಯ ಮತ್ತು ಅಂಜಿಕೆಯ ಬಲದಿಂದ ಸುಮ್ಮನಿದ್ದನು!

ಕೌಶಿಕಮುನಿಯ ಪ್ರೇರಣೆಯಿಂದ ಮಗನ ಪಕ್ಕೆಯ ಮೇಲೆ ಮಿಡು ಮಿಡನೆ ಮಿಡುಕುವ ಚೇಳು ಹರಿದಾಡಿತು! ಮಡದಿಯ ಮಗ್ಗುಲಲ್ಲಿ ಹಾವು ಭುಸ್ಸೆನ್ನಲು ಆಕೆ

ಹೆದರಿ ಕೂಗಿದಳು! ಅವರ ಬಳಿ ಬಂದು ಮೂಲೆ ಹಿಡಿದು ಹುಲಿ ಕರಡಿಗಳು ಹೂಂಕಾರಗೈದವು! ಭೂತ ಬೇತಾಳಗಳು ಸುತ್ತಿ ಸುಳಿದು ಬೊಬ್ಬಿಟ್ಟು ಅಬ್ಬರಿಸಿ ಬೆದರಿಸಿದವು!

ಗಡಗಡನೆ ನಡುಗುತ್ತ ಕಣ್ಮುಚ್ಚಿಕೊಂಡು ತನ್ನೊಡಲನ್ನು ಅಪ್ಪಿಕೊಂಡ ಸತಿಸುತರನ್ನು ಹರಿಶ್ಚಂದ್ರನು ಸಂತೈಸಿದನು. ವಿರೂಪಾಕ್ಷನ ನಾಮಸ್ಮರಣೆ ಮಾಡಿ ಎಂದು ಧೈರ್ಯ ತುಂಬಿದನು.

ಆಗ ತೆರಕಾರ ನಕ್ಷತ್ರಕನು ರಾಜನಿಗೆ ಹೇಳಿದನು.

'ಅಯ್ಯೊ ಮರುಳೇ, ಕಾಡುಪಾಲಾಗಿ ಹೆಂಡತಿ ಮಕ್ಕಳನ್ನು ಏಕೆ ನೋಯಿಸುವೆ? ಕಡುಮೂರ್ಖತನವನ್ನು ಬಿಡು. ಇನ್ನಾದರೂ ವಿಶ್ವಾಮಿತ್ರಮುನಿ ಹೇಳುವಂತೆ ಅವನ ಕುವರಿಯರನ್ನು ವಿವಾಹವಾಗು, ಸುಖದಿಂದಿರು.'

'ಮುನಿಯೇ, ಇದು ಯಾವ ನೋವು? ಯಾವ ಕಷ್ಟ? ಅನ್ಯಾಯದಿಂದ ನಡೆದು ನನ್ನನ್ನು ಪಡೆದ ಕುಲವನ್ನು ಕೆಡಿಸಲಾರೆ. ಎಲೆ ಮರುಳೆ! ಮತ್ತೆಮತ್ತೆ ನನ್ನ ಮನಸ್ಸಿನ ದೃಢತೆಯನ್ನು ಪರೀಕ್ಷಿಸಬೇಡ' ಎಂದು ರಾಜನು ಕಟ್ಟುನಿಟ್ಟಾಗಿ ಹೇಳಿದನು. ರಾತ್ರಿ ಕೊನೆಯಾಗುತ್ತ ಬಂದು ಉದಯಗಿರಿಯ ಹಣೆಯ ಮೇಲೆ ಅರುಣ ಕಿರಣ ಗೋಚರಿಸಿತು.

# ದಾವಾನಲವನ್ನು ಹಿಮ್ಮೆಟ್ಟಿಸಿದ ಚಂದ್ರಮತಿ

ಅವರು ಒಂದು ತೊರೆಯಲ್ಲಿ ಸ್ನಾನವನ್ನು ಮಾಡಿದರು. ಹರಿಶ್ಚಂದ್ರನು ಸಂಧ್ಯಾವಂದನೆ ಮಾಡಿ ಶಿವನನ್ನು ಪ್ರಾರ್ಥಿಸಿದನು. ಗುರುಸ್ಮರಣೆ ಮಾಡಿದನು. ಮಗನನ್ನು ಎತ್ತಿಕೊಂಡು ಪತ್ನಿಯನ್ನು ಪ್ರೀತಿಯಿಂದ ನೋಡಿದನು. ಮಂತ್ರಿಯೊಡನೆ ಮಾತನಾಡುತ್ತ ನಕ್ಷತ್ರಕನನ್ನು ಕೂಡಿಕೊಂಡು ವಿಶಾಲ ಅರಣ್ಯದಲ್ಲಿ ನಡೆದನು.

ದಟ್ಟವಾಗುತ್ತಿರುವ ಬಿಸಿಲ ಬಿಸಿಯು ನೆತ್ತಿಯನ್ನು ಸುಡುತ್ತಿತ್ತು. ನೆಲದಬಿಸಿ ಕಾಲನ್ನು ಸುಡುತ್ತಿತ್ತು. ಅತಿಯಾಗಿಕಾದ ಗಾಳಿಯಬಿಸಿ ದೇಹವನ್ನು ಸುಡುತ್ತಿತ್ತು. ಹಸಿವೆಂಬ ಬಿಸಿ ಒಳಗೆ, ನೀರಡಿಕೆಯ ಬಿಸಿ ಹೊರಗೆ ಅವರನ್ನು ಬೇಯಿಸಿದವು. ಅವರು ನೋಯುತ್ತ, ಸಾಯುತ್ತ, ನಿಲ್ಲುತ್ತ ನಡೆದು, ಅಳುಕುತ್ತ ಬಳಲಿ ಬರುತ್ತಿದ್ದರು. ನಿಷ್ಕರುಣ ಮುನಿ ವಿಶ್ವಾಮಿತ್ರನು ಅವರನ್ನು ಇನ್ನೂ ಹೆಚ್ಚು ಕಾಡುವ ಬಗ್ಗೆ ಕುಟಿಲ ತಂತ್ರವನ್ನು ಯೋಚಿಸಿದನು.

ಹಿರಿಯ ದಂತಗಳಲ್ಲಿ ಉರಿ ಹೊಮ್ಮುತ್ತ ಆನೆಗಳು, ಗರಿಗಳಲ್ಲಿ ಜ್ವಾಲೆ ಪ್ರಜ್ವಲಿಸುತ್ತ ಪಕ್ಷಿಗಳು ಬಂದವು! ಬೆಳೆದ ಕಾಡು ಬಿಡದೆ ಉರಿಯ ತೊಡಗಿತು! ಬೇಡತಿಯರ ಕೂದಲುಗಳು ಉರಿದವು! ಕರಡಿ, ಚಮರಿ ಮೃಗಗಳಲ್ಲಿ ಬೆಂಕಿಯ ಕೆನ್ನಾಲಗೆ ಕಂಡವು! ಬೇಡರು ಒರಲುತ್ತ ಓಡೋಡಿ ಬರುತ್ತಿದ್ದರು. ಕಾಲಾಗ್ನಿ ರುದ್ರನು ಅಕಾಲದಲ್ಲಿ ಬೆಂಕಿಯನ್ನು ಕೈಬೀಸಿ ಕರೆದನೋ ಎಂಬಂತೆ ದಾವಾನಲವು ಆವರಿಸಲು ನೃಪನು ಅಂಜಿದನು!

ಕಾಡ್ಗಿಚ್ಚು ಹೆಮ್ಮೆಳೆಗಳನ್ನು ಸುಡುತ್ತ, ಬೆಟ್ಟವನ್ನು ಸೀಳಿ ಚೆಕ್ಕೆಯಾಗಿಸಿತು! ನೆಲವನ್ನು ಸುಟ್ಟು ಕರಕಾಗಿಸಿತು! ಬೆಳೆದ ಮರಗಳನ್ನು ಸುಟ್ಟು ನೆಲಕ್ಕುರುಳಿಸಿತು! ಹೊತ್ತುತ್ತ, ಹೊಗೆಯುತ್ತ, ಹಬ್ಬುತ್ತ ಹರಿಯಿತು. ನೆಗೆಯುತ್ತ ಗಗನವನ್ನು ತಾಗಿತು! ಸುತ್ತಲೂ ಆವರಿಸಿ ಮುತ್ತಿಕೊಂಡಿತು!

ಭುಗಿ ಭುಗಿಲ್, ಧಗ ಧಗಿಲ್, ಛಿಮಿ ಛಿಮಿಲ್, ಛುರಿ ಛುರಿಲ್, ಛಟ ಛಟೆಂದು ಧಗಧಗಿಸಿ ಉರಿದು ಹಬ್ಬಿತು. ಘುಳು ಘುಳೆಂದು ನೆಗೆದ ದಳ್ಳುರಿ ಹಬ್ಬುತ್ತ, ಕರ್ಬೊಗೆಯಿಂದ ಕತ್ತಲುಂಟು ಮಾಡಿತು. ಕಾಳ್ಗಿಚ್ಚು ನಾಲ್ಕೂ ದೆಸೆಗೆ ಹಬ್ಬಿತು.

**ಭೂಪನ ಮೇಲೆ ಸಾಯಲಾರದೆ ನೊಂದು ಬೆಂದ ನಾನಾ ಖಗಮೃಗಂ ಕವಿದವು!**

ಆ ಬೆಂಕಿಯ ಗದ್ದಲದಲ್ಲಿ ಸತಿಸುತರ ಕೈ ಹಿಡಿದು ದೂರ ಹೋಗೋಣ ಎಂದು ಹರಿಶ್ಚಂದ್ರನು ಹೊರಟನು. ದಾವಾಗ್ನಿ ಅವನು ಎತ್ತೂ ಹೋಗದಂತೆ ಸುತ್ತಲೂ

ಆವರಿಸಿತು. ದಿಗ್ಭ್ರಾಂತನಾಗಿ ರಾಜನು ನಿಲ್ಲಲು – ಬೆಂಕಿಯಲ್ಲಿ ಬೆಂದ ನಾನಾ ಖಗ ಮೃಗಗಳು ಅವನ ಸುತ್ತ ಕವಿದು ಬಂದವು!

ಹೆಡೆಬೇಯುವ ಸರ್ಪ, ಪಕ್ಕೆಸುಟ್ಟ ಸಾರಾಂಗ, ಕೊರಳೆಡೆ ದಹಿಸಿರುವ ಸಿಂಹ, ತಲೆಉರಿವ ಹುಲಿ–ಹೀಗೆ ಹಲವು ಬಗೆಯಲ್ಲಿ ಸುಟ್ಟು ಹೋದ ಕಡವು, ನರಿ, ತೋಳ, ಕೋಣ, ಹಂದಿಗಳು ಕಂಗೆಟ್ಟು, ದೆಸೆಗೆಟ್ಟು ಹರಿಶ್ಚಂದ್ರ ಭೂಪನ ಮೇಲೆ ಎರಗಿ ಬಂದವು!

ರಾಜನು ಕಾಡಾನೆಗೆ ಹೆದರಿ ಸರಿದರೆ ಹುಲಿ ಮೊರೆಯುತ್ತ ಬರುವುದು. ಅದರಿಂದ ಬಿಡುಗಡೆಗೊಂಡೆಯೆನಲು ಕರಡಿ ನುಗ್ಗಿ ಬರುವುದು. ಹಿಂದಕೆ ಸಾಗಿದರೆ ಸರ್ಪವಿದ್ದು; ತಿರುಗಿದರೆ ಸಿಂಹ ಗರ್ಜಿಸುವುದು. ಪಕ್ಕದಲ್ಲಿ ಹಂದಿ ಮೇಲೆ ಬೀಳಲು ಸಿದ್ಧವಾಗಿದ್ದರೆ; ಇರಿಯಲು ಸಾರಂಗ ನೋಡುತ್ತಿದೆ. ಮೃಗಗಳಿಂದ ಹೇಗೋ ತಪ್ಪಿಸಿಕೊಂಡ ಹರಿಶ್ಚಂದ್ರನು ದಡವೇರಿ ನಿಂತನು. ಅಲ್ಲಿಗೂ ದಿಕ್ಕು ದಿಕ್ಕಿನಿಂದ ನುಗ್ಗಿ ಹೋಗುತ್ತಿರುವ ಅಗ್ನಿಯನ್ನು ಕಂಡು ದೇವತೆಗಳು ನೊಂದು ಬೆಂದು ಮರುಗಿದರು. 'ಶಿವ ಶಿವಾ ಮಹಾದೇವ, ಉರಿ ಕವಿದು ಮೊಗೆದು ಹರಿಶ್ಚಂದ್ರನನ್ನು ಕೊಂದುಬಿಡುತ್ತದೆ. ಕರುಣಾಕರನೇ ನೃಪನನ್ನು ರಕ್ಷಿಸು' ಎಂದು ಮೊರೆಯಿಟ್ಟರು.

ಆ ದಾವಾನಲದ ದಾಳಿಯಲ್ಲಿ ಹರಿಶ್ಚಂದ್ರನೃಪನು ನಡುಗದೆ, ಬೆದರದೆ, ಹಿಮ್ಮೆಟ್ಟದೆ, ಅಲುಗಾಡದೆ– ಪರಿವೇಷದೊಳಗಿನ ರವಿಯಂತಿದ್ದನು! ಸಮುದ್ರವನ್ನು ದೇವತೆಗಳು ಮತ್ತು ರಾಕ್ಷಸರು ಕೂಡಿ ಕಡೆಯುವಾಗ ಮೂರು ಲೋಕವನ್ನು ಸುಡುವ ವಿಷದುರಿ ಹುಟ್ಟಲು ಅದರ ನಡುವೆ ನಿಂತ ಪರಶಿವನಂತೆ ಇದ್ದನು!

**ಮಗನೇ ಬೇಡುವೊಡೀವ ಶಿವನುಂಟು ಪಡೆವ ನೀನುಂಟು**

ಕಾಶಿಯನ್ನು ತಲುಪಲಿಲ್ಲ. ಮುನಿಯ ಋಣವನ್ನು ತೀರಿಸಲಿಲ್ಲ. ಆಯಸ್ಸು ತುಂಬಿ ಮಡಿಯಲಿಲ್ಲ. ನಾನೊಬ್ಬನೇ ಅಲ್ಲದೆ ನನ್ನ ಜೊತೆ ಹೆಂಡತಿ ಮಗ ಮಂತ್ರಿ ಈ ದಳ್ಳುರಿಯಲ್ಲಿ ದುರ್ಮರಣಕ್ಕೆ ಈಡಾಗುವರಲ್ಲ ಎಂದು ಹರಿಶ್ಚಂದ್ರನು ಪರಿಪರಿಯಾಗಿ ಚಿಂತಿಸಿ ಮರುಗಿದನು.

ಯುದ್ಧದಲ್ಲಿ ವೈರಿಗಳನ್ನು ಸದೆಬಡಿದು ವೀರಸ್ವರ್ಗ ಸೇರಲಿಲ್ಲ. ಭೀಕರ ಭೂತ ಬೇತಾಳಗಳನ್ನು ಎದುರಿಸಿ ಸಾಯಲಿಲ್ಲ. ವ್ಯರ್ಥವಾಗಿ ಈ ಉರಿಯಲ್ಲಿ ಉರಿಯುವಂತಾದೆನೇ ಎಂದು ರಾಜ ಪರಿತಪಿಸುತ್ತ, ಮಂತ್ರಿಯನ್ನುದ್ದೇಶಿಸಿ ಹೀಗೆ ಹೇಳಿದನು,

'ಎಲೈ ಮಂತ್ರಿಯೇ, ರಭಸವಾಗಿ ಕಪ್ಪುಹೊಗೆ ಸುತ್ತಿ ದಳ್ಳುರಿಗಳು ವ್ಯಾಪಿಸಿಕೊಳ್ಳುತ್ತಿವೆ. ಕೆಂಗಿಡಿಗೆದರಿ ಕೆಂಡಗಳು ಚಿಮ್ಮಿ ಬರುತ್ತಿವೆ. ಅದರಲ್ಲಿ ನನ್ನ ಮಗ ಮಡದಿ ಬೆಂದು

ಸಾಯುವುದನ್ನು ಕಣ್ಣಾರೆ ಕಾಣಲಾರೆ. ಅದಕ್ಕೆ ಮೊದಲು ನಾನು ಬೆಂಕಿಗೆ ಬೀಳುವೆ. ನನ್ನನ್ನು ತಡೆಯಬೇಡ, ದುಃಖಿಸಬೇಡ.'

'ಪ್ರಭುವೇ, ಒಡೆಯನ ಅಳಿವನ್ನು ಕಾಣುವ ನನ್ನಂತಹ ಪಾಪಿಗಿಂತ ಇನ್ನು ಯಾರಿದ್ದಾರು? ನೀನು ಅಳಿದ ನಂತರ ನಾನು ಅಳಿಯುವುದರಲ್ಲಿ ಯಾವ ಫಲವಿದೆ? ನನ್ನ ರಾಜನ ಮುಂದೆ ಮಡಿಯುವುದೇ ಒಂದು ಪುಣ್ಯಕೀರ್ತಿ. ಆಳು ಮುಂದೆ ಹೋದಲ್ಲದೆ ಅರಸು ನಡೆಯುವನೆ? ತಂದೆ, ಕೆಟ್ಟ ನುಡಿಯನ್ನು ನುಡಿಯದಿರು' ಎಂದು ಮಂತ್ರಿ ಸತ್ಯಕೀರ್ತಿ ರಾಜನಿಗೆ ಕೈ ಮುಗಿದನು.

'ಸತ್ಯಕೀರ್ತಿಯೇ, ನೀನು ಉತ್ತಮ ಕುಲೀನನೂ, ಮಿತ್ರನೂ, ವೇದವೇತ್ತನೂ, ಸರ್ವಾಗಮಜ್ಞನೂ, ಶಿವಭಕ್ತನೂ ಆಗಿರುವೆ. ವಯಸ್ಸಾಗಿ ಹೆಂಡತಿ ಮಕ್ಕಳನ್ನು ಬಿಟ್ಟು ನನ್ನನ್ನು ನಂಬಿ, ನನ್ನ ಹಿಂದೆ ಬಂದಿರುವೆ. ಮುತ್ತುವ ಅಗ್ನಿಗೆ ನಿನ್ನನ್ನು ಮೊದಲು ನೂಕಿ ನಾನು ಯಾವ ನರಕಕ್ಕೆ ಹೋಗಲಿ. ಅಪಕೀರ್ತಿ ಹೊತ್ತುಕೊಳ್ಳಲಿ. ನನಗೆ ಮೊದಲು ನೀನು ಹೋದರೆ ನನ್ನಾಣೆ!' ಎಂದು ರಾಜನು ಮಂತ್ರಿ ಸತ್ಯಕೀರ್ತಿಯನ್ನು ತಡೆದನು. ಆಗ ಮಗ ಲೋಹಿತಾಶ್ವನು ತಂದೆಯನ್ನು ಕೇಳಿಕೊಂಡನು.

'ಅಪ್ಪಾಜಿ, ನನ್ನನ್ನು ಅಗ್ನಿಗೆ ಅರ್ಪಿಸು. ಅದರಿಂದ ತೃಪ್ತನಾದ ಅವನು ನಿಮ್ಮೆಲ್ಲರನ್ನು ರಕ್ಷಿಸುವನು. ಬೇಗ ಕಳುಹಿಸು.'

'ಮಗನೇ, ಸಾಮ್ರಾಜ್ಯದ ಹಿತರಕ್ಷಣೆ ಮಾಡಬೇಕಾಗಿರುವ ನೀನು ಅಳಿಯಲಾಗದು.'

'ಭೂಭುಜನೇ, ಭೂಭಾಗದ ಒಡೆತನ ವಿಶ್ವಾಮಿತ್ರಮುನಿಗಳಿಗೆ ಆಗಿಹೋಗಿದೆ. ಇನ್ನೇನು ಆಳುವುದು?'

'ನನ್ನ ವಂಶದ ಕೀರ್ತಿಯೇ, ಉತ್ತಾನಪಾದ ರಾಜನ ಮಗ ಧ್ರುವನು ತನ್ನ ಮಲತಾಯಿಯಾದ ಸುರುಚಿ ಬಯ್ದುದರಿಂದು ಜುಗುಪ್ಸೆಗೊಂಡನು. ಶಿವನನ್ನು ಮೆಚ್ಚಿಸಿ ಚಕ್ರವರ್ತಿಯಾದನು. ಮಗನೇ, ಬೇಡುವಡೆ ಕೊಡುವ ಶಿವನುಂಟು. ಪಡೆವ ನೀನುಂಟು. ರಾಜ್ಯವಾಳುವ ಭಾಗ್ಯ ಉಂಟು. ನೀನು ಅಳಿಯಬೇಡ."

ರಾಜನು ಮಗನಿಗೆ ಆ ರೀತಿ ಉಪದೇಶಿಸುತ್ತಿರಲು, ರಾಣಿ ಚಂದ್ರಮತಿಯು ಹೀಗೆ ಹೇಳಿದಳು,

'ಎನ್ನ ದೊರೆಯೇ, ಮಾತು ಮುಗಿಯಿತೆ? ದಳ್ಳುರಿ ಮಿಕ್ಕು ಮೀರಿ ಬರುತ್ತಿದೆ. ಅಗ್ನಿಗೆ ಅರ್ಪಿಸಿಕೊಳ್ಳಲು ನನಗೆ ಅಪ್ಪಣೆ ಕೊಡಿ.'

ಆ ದಿವ್ಯ ಸತಿಯ ನುಡಿ ಕೇಳಿ ಹರಿಶ್ಚಂದ್ರನು,

'ಎಲೈ ಚಂದ್ರಮತಿ, ಘನ ಸಿರಿಸಂಪದಗಳನ್ನು ಕಳೆದುಕೊಂಡ ಬಳಿಕ, ತನ್ನ ಸತಿಸುತರನ್ನು ಕಷ್ಟದಲ್ಲಿ ಉಳಿಸಿ, ತಾನು ಅನಂತರ ಅಗ್ನಿವಶನಾದ ಎಂದೆನಿಸಿಕೊಳ್ಳಬೇಕು. ಪ್ರಾಣಭೀತಿಯಿಂದ ಮುತ್ತಿಉರಿವ ಉರಿಗೆ ಅಬಲೆಯನ್ನು ಕೊಟ್ಟನು ಎಂಬ ಮಾತನ್ನು ಹೊರಬಾರದು.'

'ಎನ್ನ ಪತಿದೈವವೇ, ಈ ಬೆಂಕಿಯು ಮುಳಿದು ಮೊಗೆದು ಎಲ್ಲರನ್ನೂ ಕೊಲ್ಲದೆ ನನ್ನೊಬ್ಬಳನ್ನೇ ಕೊಲ್ಲುವುದೆ? ನಿಮ್ಮ ಜೊತೆಯಲ್ಲಿ ಜೀವ ಬಿಡುವುದೇ ಉಚಿತ. ನಿಮ್ಮ ಬಳಿಕ ಸಾಯುವುದು ಮುತ್ತೈದೆತನವಲ್ಲ. ನಾನು ನಿಮಗೂ ಮೊದಲು ಹೋಗುವೆ. ಕಳುಹಿಸಿಕೊಡಿ' ಎಂದು ಕೈ ಮುಗಿದು ಪತಿಯನ್ನು ಪತಿವ್ರತೆಯರಾನಂದ ನಿಧಿ ಬೇಡಿಕೊಂಡಳು.

ಒಳಗೆ ಒತ್ತೊತ್ತಿ ಉಕ್ಕುವ ದುಃಖವನ್ನು ಅದುಮಿಟ್ಟುಕೊಂಡು ಅರಸನು 'ಆಗಲಿ' ಎಂದನು.

ಚಂದ್ರಮತಿ ಪತಿರಾಯನಿಗೆ ನಮಸ್ಕರಿಸಿ ಬೀಳ್ಕೊಡುವುದನ್ನು ಕಂಡ ಮಗ ಲೋಹಿತಾಶ್ವನು,

'ಅವ್ವ, ಇದೆಲ್ಲಿಗೆ ಹೋಗುತ್ತಿರುವೆ? ನಿನ್ನೊಡನೆ ನಾನೂ ಬರುತ್ತೇನೆ' ಎಂದು ಹೇಳಿ ತಾಯಿಯುಟ್ಟ ಬಟ್ಟೆಯ ತುದಿ ಹಿಡಿದು ಗೋಳಿಟ್ಟನು. ಅವನನ್ನು ಸೆಳೆದಪ್ಪಿಕೊಂಡು ಮುದ್ದಾಡಿದಳು. ಕಣ್ಣೀರನ್ನು ಒರಸಿದಳು. ತಬ್ಬಿಕೊಂಡು,

'ಅಳಬೇಡ ಕಂದ, ಬೇಗನೆ ಬಂದುಬಿಡುವೆನು' ಎಂದು ಮಗನನ್ನು ಸಂತೈಸುತ್ತ ಪತಿಯ ಕಡೆ ತಿರುಗಿ,

'ನನ್ನ ಪ್ರಾಣೇಶ, ನನ್ನನ್ನು ಒಲಿದು ನಾನು ಕೇಳಿದ್ದನ್ನು ಕೊಟ್ಟಿರುವೆ. ಪತಿಯೆಂಬ ನಿನ್ನ ತೇಜದ ಬಲದಿಂದ ನಾನಿರುವೆ. ನಾನು ಅಂಜದೆ, ಹಿಂಜರಿಯದೆ, ಅಳುಕದೆ ನಿನ್ನೊಡನೆ ಒಂದೇ ಪೀಠದಲ್ಲಿ ಕುಳಿತಿದ್ದೇನೆ. ಕೆಲವೊಮ್ಮೆ ಎದುರುತ್ತರ ಕೊಟ್ಟಿದ್ದೇನೆ. ಅಂತಹ ಸರ್ವಾಪರಾಧವನ್ನು ಮನ್ನಿಸು. ಕರುಣಿಸು' ಎಂದು ಪಾದಗಳಿಗೆರಗಿ, ಬೀಳ್ಕೊಂಡು ಅಗ್ನಿಯ ಎದುರು ನಿಂತಳು.

**ಉತ್ತಮರ ಮುಂದಾವ ಠಕ್ಕಿರಲಾಪುದು.**

ದಿಕ್ಕುಗಳಿಗೆ ನಮಸ್ಕರಿಸಿದಳು. ದೈವಕ್ಕೆ ಎರಗಿದಳು. ರವಿಗೆ ವಂದಿಸಿ ಪ್ರಾರ್ಥಿಸಿದಳು.

'ಕೋಟಿ ಜನ್ಮಗಳನ್ನು ಎತ್ತಿದರೂ ಹರಿಶ್ಚಂದ್ರನೇ ಪತಿಯಾಗಲಿ. ಲೋಹಿತಾಶ್ವನೇ ಮಗನಾಗಲಿ. ಸತ್ಯಕೀರ್ತಿಯೇ ಮಂತ್ರಿಯಾಗಲಿ. ತರುಣ ಶಶಿಮೌಳಿಯೇ ದೈವವಾಗಲಿ. ನಮ್ಮ ಇಳೆಯನ್ನು ಪಾಲಿಸುವ ವಿಶ್ವಾಮಿತ್ರನೇ ನಿತ್ಯನಾಗಲಿ' ಎಂದು ಬೇಡಿಕೊಳ್ಳುತ್ತ ಆನಂದ ಆವೇಶದಿಂದ ತನ್ನ ಪತಿಯನ್ನು ನೋಡುತ್ತ ಹೀಗೆ ಹೇಳಿದಳು.

'ಪೊಡವೀಶನೇ ಕೇಳು. ಉಭಯಕುಲ ಪರಿಶುದ್ಧೆಯಲ್ಲದಿದ್ದರೆ, ನಿನ್ನನ್ನು ಅಲ್ಲದೆ ಅನ್ಯರನ್ನು ನೆನೆದಿದ್ದರೆ, ನಿನಗೊಂದನ್ನಿತ್ತು ನಾನೊಂದು ಉಂಡಿದ್ದರೆ, ಶಿವನಿಗಲ್ಲದೆ ಬೇರೆ ದೈವಕ್ಕೆ ನಮಿಸಿದ್ದರೆ, ನನ್ನನ್ನು ಈ ದಾವಾಗ್ನಿ ಒಡೆದು ಮುಕ್ಕಲಿ! ಅಲ್ಲದಿದ್ದರೆ ದಾರಿಕೊಟ್ಟು ದೂರ ಸರಿಯಲಿ!'

ಹಾಗೆ ಹೇಳುತ್ತಿರುವ ರಾಣಿಯನ್ನು ಬೆದರಿಸಬೇಕೆಂದು ಕಾಡ್ಗಿಚ್ಚು ನೆಗೆದು ಗಗನವನ್ನು ವ್ಯಾಪಿಸಿ ಸುತ್ತಿ ಮುತ್ತಿಕೊಂಡಿತು! ಪತಿವ್ರತಾ ಶಿರೋಮಣಿ ಚಂದ್ರಮತಿ ಶಿವನನ್ನು ಧ್ಯಾನಿಸುತ್ತ ಆ ದಳ್ಳುರಿಯನ್ನು ಹೊಕ್ಕಳು!

ಅವಳು ಹೊಕ್ಕಿದ್ದು ಬೆಳಗುವ ತರುಣ ಸೂರ್ಯನು ಕತ್ತಲೆಯನ್ನು ಹೊಕ್ಕಂತಾಯಿತು! ಶಿವ ಶಿವ ಮಹಾದೇವ! ಅಲ್ಲಿ ನೆರೆದಿದ್ದ ಕೌಶಿಕನ ಕೃತಕಾಗ್ನಿಯು ಹರಿದೋಡಿತು! ದಾರಿಕೊಟ್ಟಿತು! ಬಾಪುರೆ! ಉತ್ತಮರ ಮುಂದೆ ಯಾವ ಠಕ್ಕು ತಾನೆ ಇರಲು ಸಾಧ್ಯ!

ಸುರರ ಹೂಮಳೆಯ ತಂಪಿಂದ ನೆಲದ ಬಿಸಿ ಆರಿತು. ಅಗ್ನಿಯ ನೆವದಿಂದ ಸತಿಯ ಶುಚಿತನ ತಿಳಿಯಿತು. ಪತ್ನಿಯನ್ನು ರಾಜನು ಅಪ್ಪಿಕೊಂಡನು. ಮಂತ್ರಿಯು ನಮಸ್ಕರಿಸಿದನು. ಪುತ್ರನು ಸಂತಸದಲ್ಲಿ ನಲಿದಾಡಿದನು.

'ಹರನ ಕೃಪೆಯಿರುವಾಗ ಅಗ್ನಿಯ ಭಯವೆಲ್ಲಿ? ಒಮ್ಮಿಂದೊಮ್ಮೆಗೆ ಅದು ಪರಿಹಾರವಾಗಿದೆ. ಮುನಿಗೆ ಕೊಟ್ಟ ಅವಧಿಯು ಸಮೀಪಿಸುತ್ತಿದೆ. ಬೇಗಬೇಗ ನಡೆದು ಹೋಗೋಣ' ಎಂದು ಹೇಳಿದ ಹರಿಶ್ಚಂದ್ರನೊಡನೆ ಎಲ್ಲರೂ ತ್ವರೆಯಿಂದ ಸಾಗಿದರು.

# ಜಗದಿಹಪರಕೆ ಸೊಗಸು ಕಾಶೀಕ್ಷೇತ್ರ

ಹಲವು ನಗರ, ಅರಣ್ಯ ಗಿರಿಗಳನ್ನು ಸುತ್ತಾಡಿ ನಡೆದು ಬರುತ್ತಿರಲು ಮುಂದೆ ಜುಳು ಜುಳು ನಾದದಿಂದ ಹರಿವ ಗಂಗಾನದಿಯು ಕಾಣಿಸಿತು. ಸುಂದರ ತೆರೆಗಳು, ಮುಮ್ಮಳಿಸುವ ನೊರೆ, ಮುಂದಿಳಿವ ಸುಳಿಗಳ ಬಳಗ, ಭೋರ್ಗರೆದು ಬೊಬ್ಬಿಡುವ ಪ್ರವಾಹದಿಂದ ಆ ನದಿ ಕೂಡಿತ್ತು.

ಗಂಗೆಯನ್ನು ಬಿಡದೆ ಕೇಳಿದವರಿಗೆ ಪಾಪ ಪರಿಹಾರ, ನೆನೆದವರಿಗೆ ಮುಕ್ತಿ, ನುಡಿದವರಿಗೆ ಸರ್ವಸಿದ್ಧಿ ಪ್ರಾಪ್ತವಾಗುವುದು. ಗಂಗೆಯನ್ನು ಕಂಡರೆ ಭವನಾಶ, ಹೊಗಳಿದರೆ ಸುರೇಂದ್ರತ್ವ, ಸೋಂಕಿದರೆ ಬ್ರಹ್ಮಪದವಿ, ಕುಡಿದರೆ ಮುಕ್ತಿ ಎಂಬ ಗಂಗೆಯ ಮಹಿಮೆಗೆ ವೇದವೇ ಸಾಕ್ಷಿ. ಅವರೆಲ್ಲರೂ ಪವಿತ್ರ ಗಂಗಾನದಿಯಲ್ಲಿ ಮಿಂದು ವಿಶ್ವನಾಥನ ದೇವಾಲಯಕ್ಕೆ ನಡೆದರು.

ಕಾಶಿ ಇಹಪರಕ್ಕೆ ಸೊಗಸಾದ ಪುಣ್ಯಕ್ಷೇತ್ರ. ಅಲ್ಲಿ ಸುಖವಿಲ್ಲ, ಪುಣ್ಯವುಂಟು. ಅಲ್ಲಿ ಕ್ಷಾಮಡಾಮರಗಳಿಲ್ಲ. ರೋಗರುಜಿನಗಳು, ಪಾಪತಾಪಗಳಿಲ್ಲ. ಅದು ರುದ್ರನ ಆವಾಸ ಸ್ಥಾನ. ಆ ಮಹಿಮಾ ಕ್ಷೇತ್ರವನ್ನು ನೋಡುತ್ತ ಅರಸನು ನಡೆದನು.

ಮದನಹರ ವಿಶ್ವಪತಿಗೆ ಸರಿಸಮನಾದ ದೈವವು ಈ ಹದಿನಾಲ್ಕು ಲೋಕಗಳಲ್ಲಿ ಇಲ್ಲವೆಂದು ಹೇಳಲು ಹಸ್ತವನ್ನು ಎತ್ತಿದಂತೆ  ಪತಾಕೆಗಳು ಕಾಣುತ್ತಿದ್ದವು. ಹಲವು ಪಾತಕಗಳನ್ನು ಮಾಡಿ ಸೋತು ಬಂದವರಿಗೆ–ಹೆದರಬೇಡಿ ಎಂದು ಅಭಯಹಸ್ತ ಎತ್ತಿದಂತೆ ಅವು ಕಾಣುತ್ತಿದ್ದವು. ಪುಣ್ಯ ಪದವಿಗಳನ್ನು ಬೇಡುವವರು ತನ್ನಲ್ಲಿಗೆ ಬರಬಹುದೆಂದು ಕರೆಯಲು ಎತ್ತಿದ ಹಸ್ತಗಳೋ ಎಂಬಂತೆ ಧ್ವಜಗಳು ಕಂಗೊಳಿಸುತ್ತಿದ್ದವು. ಸೂರ್ಯನ ಪ್ರಕಾಶವನ್ನೇ ತಡೆದು ನಿಲ್ಲಿಸುವೆವು ಎಂಬಂತೆ ಹೊಳೆಯುವ ಹೊನ್ನಿನ ಕಳಸಗಳು ಅಲ್ಲಿಯ ಶಿವಾಲಯಗಳ ಗೋಪುರಗಳಲ್ಲಿ ಶೋಭಿಸುತ್ತಿದ್ದವು. ಅಲ್ಲಿ ಆ ಸೊಗಸನ್ನು ನೋಡಿ ಹೊಗಳುತ್ತ, ಹಾಡುತ್ತ, ಪ್ರದಕ್ಷಿಣೆ ಹಾಕಿ ನಲಿಯುವ ಭಕ್ತಿಯಲ್ಲಿ ಮಿಂದ ನಾನಾಜನಗಳಿದ್ದರು. ಅವರ ಜೊತೆಗೆ ಒಂದಾಗಿಬಂದ ಹರಿಶ್ಚಂದ್ರನು ಪತ್ನಿ ಪುತ್ರರೊಡನೆ ವಿಶ್ವನಾಥನ ದರ್ಶನವನ್ನು ಪಡೆದನು.

'ಜಯ ಜನಾರ್ದನ ವಂದ್ಯ ಜಯ ಜಲಜಭವ ಪೂಜ್ಯ
ಜಯ ಜಂಭರಿಪುನಾಥ ಜಯ ಪೂಜನಾತೀತ
ಜಯ ಜಾತವೇದಾಕ್ಷ ಜಯ ಜಾಹ್ನವೀಮಕುಟ ಜಯ ಜರಾಮರಣದೂರ
ಜಯ ಜಯ ಚಿದಾನಂದ ಜಯ ಜಯ ಜಗತ್ರಾಣ
ಜಯ ಜಯ ಜಿನಾರಾತಿ ಜಯ ಜಯ ಜಯಾವರಣ ಜಯ'

ಎಂದು ಜನ ಪ್ರಾರ್ಥಿಸುತ್ತ ಪೂಜಿಸುತ್ತಿರುವ ಶಿವನ ಧ್ಯಾನದಲ್ಲಿ ಹರಿಶ್ಚಂದ್ರನು ಒಂದಾಗಿ ಹೋದನು. ಸುಖರಸದಲ್ಲಿ ಓಲಾಡಿದನು. ವಿಶ್ವನಾಥನನ್ನು ಕೀರ್ತಿಸಿ ಸ್ಥಿರ ಭಕ್ತಿಯನ್ನು ಬೇಡಿ ಹೊರಬಂದನು. ಅಲ್ಲಿರುವ ಕಾಮೇಶ್ವರ, ವಿಭಾಂಡೇಶ್ವರ, ದಕ್ಷೇಶ್ವರ ಲಿಂಗಗಳನ್ನು ದರ್ಶಿಸಿದನು.

ರಾಜನು ಅಲ್ಲಿರುವ ಮಂಗಳಮಯವಾದ ಲಿಂಗಗಳ ರಚನೆ, ಅಲ್ಲಿನ ಸಡಗರಕ್ಕೆ ಬೆರಗಾಗಿ ತನ್ನ ಎಲ್ಲ ನಿರಾಶೆ, ನೋವು, ವ್ಯಥೆಗಳನ್ನು ಮರೆತನು. ಆಗ ಮಾರಿಯ ರೀತಿ ಬಂದ ನಕ್ಷತ್ರಿಕನು 'ನನ್ನ ಹೊನ್ನನ್ನು ಮೊದಲು ಕೊಡು. ತಡಮಾಡಿದರೆ ನನ್ನ ಒಡೆಯ ಕಡು ಕೋಪಿಯಾಗುವನು' ಎಂದು ಜರೆಯುತ್ತ ರಾಜನ ಸೆರಗನ್ನು ಎಳೆದು, 'ನೀನು ಇಲ್ಲಿಗೆ ಬಂದು ಒಂದು ತಿಂಗಳು ಕಳೆಯಿತು. ಇಲ್ಲಿಯವರೆಗೆ ನಿನ್ನನ್ನು ಸೈರಿಸಿದೆನು. ನಿನಗೆ ಕೊಟ್ಟ ಅವಧಿ ಇಂದಿಗೆ ಮುಗಿಯುತ್ತದೆ. ಈಗ ಹೊನ್ನನ್ನು ಕೊಡು. ಇಲ್ಲದಿದ್ದರೆ ನಿನ್ನ ಸತ್ಯವ್ರತವೂ ಮುಗಿಯುತ್ತದೆ' ಎಂದು ನಿಷ್ಠುರವಾಗಿ ಹೇಳಿದನು.

## ಪತ್ನಿ ಪುತ್ರ ವಿಕ್ರಯ, ಆತ್ಮ ವಿಕ್ರಯ

ಹರಿಶ್ಚಂದ್ರನು ಕೊಟ್ಟ ಅವಧಿಗೆ ಅದೇ ಕೊನೆಯ ದಿನವೆಂದು ನೆನೆದು ಹೌಹಾರಿದನು. ತೆರಕಾರ ನಕ್ಷತ್ರಿಕನು ಕಟು ಉಗ್ರ ಸ್ವಭಾವದವನು. ಕಾಶಿ ಅಪರಿಚಿತ ಸ್ಥಳ. ಕಾಲೂರಲು ಎಡೆಯಿಲ್ಲ. ಅಭಿಮಾನವನ್ನು ಬಿಟ್ಟು ಭಿಕ್ಷೆ ಬೇಡಲು ಆಗುವುದಿಲ್ಲ. ಕೃಷಿಯಿಂದ ಹುಟ್ಟುವಳಿ ಪಡೆಯಲು ಜಮೀನು ಇಲ್ಲ. ಇನ್ನೇನು ಮಾಡುವುದು ಎಂದು ಅವನು ವ್ಯಥೆಪಟ್ಟನು.

ನೆನೆದ ಸುಖವನ್ನು ಕೊಡುತ್ತಿದ್ದ ಸಕಲ ಸಾಮ್ರಾಜ್ಯವನ್ನು ಸತ್ಯದ ನಿಮಿತ್ತವಾಗಿ ಕೊಟ್ಟು ಬಂದಿದ್ದೇನೆ. ಆದರೆ ಆ ಸತ್ಯವೇ ಇಂದು ಲೂಟಿಯಾಗಿ ಹೋಗುತ್ತಿದೆ. ನನಗಿಂತ ಪಾಪಿಗಳಿನ್ನಾರು ಇರುವರು ಎಂದು ಭೂನಾಥನು ಮನನೊಂದು, ಧೃತಿಗೆಟ್ಟು, ಮರವಟ್ಟಿ ಹೋದನು. ಕಣ್ಣು ಕಂಬನಿದುಂಬಿತು. ನಿಟ್ಟುಸಿರು ಬಿಟ್ಟನು. ಕಣ್ಣೀವೆಯನ್ನು ಹರಕಲು ವಸ್ತ್ರದಿಂದ ಮರೆಯಾಗಿಸಿಕೊಂಡನು. ಆ ದೀನ ಅಸಹಾಯ ಸ್ಥಿತಿಯಲ್ಲಿ ತೆರಕಾರನು ಬಿರುನುಡಿಗಳಿಂದ ಜರೆಯುತ್ತಲೇ ಇದ್ದನು.

ರಾಣಿ ಚಂದ್ರಮತಿಯು ರಾಜನು ಚಿಂತಾಗ್ನಿಯ ಉರಿಯಲ್ಲಿ ಬೆಂದು ಹೋಗುತ್ತಿರುವುದನ್ನು ಕಂಡು ಜಾಗೃತಗೊಂಡಳು. ಪತಿಗೆ ಧೈರ್ಯ ತುಂಬುತ್ತ ನುಡಿದಳು.

'ಕೊಟ್ಟ ಅವಧಿಗೆ ಇನ್ನು ಎರಡು ಜಾವದ ಸಮಯವಿದೆ. ಅಷ್ಟರಲ್ಲಿ ಸಮಸ್ಯೆಯ ನಿವಾರಣೆಗೆ ಪ್ರಯತ್ನಿಸಬೇಕು. ಅದು ಬಿಟ್ಟು ಮೂಕವಾಗಿದ್ದರೆ ಏನು ಫಲ?'

'ನಾನೇನು ಮಾಡಲಿ, ನೀನೇ ಹೇಳು.'

'ನನ್ನೊಡೆಯ ಸಾಲದಲ್ಲಿ ಹೋದಷ್ಟು ಹೋಗಲಿ. ನಮ್ಮಿಬ್ಬರನ್ನು ಮಾರಿ, ಉಳಿದುದಕ್ಕೆ ಅನಂತರ ಪ್ರಯತ್ನಿಸು.'

'ನಿಮ್ಮನ್ನು ಅತಿ ನೋವಿಗೀಡು ಮಾಡಿ, ಕಡುಕಷ್ಟದಲ್ಲಿ ಪರದೇಶಕ್ಕೆ ಕರೆದುಕೊಂಡು ಬಂದೆ. ಈಗ ನಾನು ಬದುಕಿದ್ದು ನಿಮ್ಮನ್ನು ಮಾರಬೇಕೆ?' ಎಂದು ಕಣ್ಣಂಚಿನಲ್ಲಿ ನೀರು ಸುರಿಸುತ್ತ, ಮಡದಿಯ ಕೈ ಹಿಡಿದು ಮಮ್ಮಲ ಮರಗಿದನು.

### ಲಜ್ಜೆಗೆಡದೆಮ್ಮ ಮಾರು ಮತ್ತಾದುದಾಗಲಿ

'ನಿಮಗೊಂದು ಮರುಳುತನ. ಸತ್ಯಕ್ಕೆ ಭಂಗತಂದರೆ ಶಿವನು ಮೆಚ್ಚುವನೆ? ಲಜ್ಜೆಗೆಡದೆ ನಮ್ಮನ್ನು ಮಾರು. ಮುಂದೆ ಆಗುವುದು ಆಗಲಿ' ಎಂದು ಪತಿಯನ್ನು

ಸಮಾಧಾನಿಸುತ್ತ, ಹಿಡಿದ ಕೈಯಲ್ಲಿ ರಾಜನಿಗೆ ಸಂತೈಸುವ ಮೃದು ಸ್ಪರ್ಶ ನೀಡಿದಳು. ಅವನು 'ಆಗಲಿ' ಎಂದು ಒಪ್ಪಿದನು.

ಪೊಡವಿಪತಿಯಾದ ಹರಿಶ್ಚಂದ್ರನು ಸತಿಸುತರ ತಲೆಗಳಲ್ಲಿ ಹುಲ್ಲನ್ನು ಕಟ್ಟಿದನು. ಕೈ ಹಿಡಿದು ನಡೆಯುತ್ತ ಅವರನ್ನು ಮುಂದೊಡ್ಡಿ ತೋರಿಸುತ್ತ ಬೀದಿಯಲ್ಲಿ, ಸಂದಿಯಲ್ಲಿ ಪುರದ ಎಲ್ಲ ಕಡೆ ಒಂದೇ ಸಮನೆ ನಾಚಿಕೆ ಬಿಟ್ಟು, 'ಇವರು ಮಾರಾಟಕ್ಕಿರುವರು, ಕೊಂಡುಕೊಳ್ಳಿ' ಎಂದು ಏರುದನಿಯಲ್ಲಿ ಒಂದೇಸಮನೆ ಕೂಗುತ್ತ ಸುತ್ತಾಡಿದನು. ಆದರೆ ಕೊಂಡುಕೊಳ್ಳಲು ಯಾರೂ ಬಾರದಿರುವಾಗ ಸತ್ಯನಿಧಿ ಭೂಪಾಲನು ಅತಿ ಸಂಕಟಕ್ಕೊಳಗಾದನು.

ಆಗ ವಿಶ್ವಾಮಿತ್ರ ಮುನಿಗಳ ಆದೇಶದಂತೆ ಅಗ್ನಿಯು ವಿಪ್ರವೇಷದಿಂದ ಅಲ್ಲಿಗೆ ಬಂದು ಹರಿಶ್ಚಂದ್ರನನ್ನು ಕೇಳಿದನು.

'ಯಾವ ಸತಿ ಪುತ್ರರು? ಎಷ್ಟು ಜನ?'

'ಇವರಿಬ್ಬರು.'

'ಉಹು, ಇವನು ಅಬಲ, ಇವಳು ಮುಪ್ಪಿನವಳು. ಮನೆಯಲ್ಲಿ ಇನ್ನು ಯಾರಾದರೂ ಗಟ್ಟಿಮುಟ್ಟಾಗಿದ್ದರೆ ಅವರನ್ನು ಕರೆದುಕೊಂಡು ಬಾ.'

'ಸ್ವಾಮಿ, ನನಗೆ ಇರುವವರೇ ಇವರಿಬ್ಬರು. ಇವರನ್ನು ಕೊಂಡುಕೊಂಡು ಉಪಕಾರ ಮಾಡು.'

'ಬೆಲೆ ಹೇಳು. ನನಗೆ ಒಪ್ಪಿಗೆಯಾದರೆ, ಹೂಂ ಎನ್ನುವೆ. ಏಳೆಂಟು ದಿನಕ್ಕೆ ಹಣ ತಂದುಕೊಡುವೆ' ಎಂದು ವಿಪ್ರನು ನುಡಿಯಲು, ಹರಿಶ್ಚಂದ್ರನು ಹೌಹಾರಿದನು. ಅತಿ ದೈನ್ಯದಿಂದ ಕೇಳಿಕೊಂಡನು.

'ತಂದೆಯೇ, ಇಂದು ಸಾಯಂಕಾಲದೊಳಗೆ ಒಂದು ರಾಶಿ ಹೊನ್ನನ್ನು ಕೊಡುವೆನು ಎಂದು ಭಾಷೆಯನ್ನು ಕೊಟ್ಟಿದ್ದೇನೆ. ಕೊಡದೆ ಇದ್ದರೆ ಅನರ್ಥ ಉಂಟಾಗುವುದು. ಲಗತ್ತಿನ ವಿಷಯವನ್ನು ಪರಿಗಣಿಸದೆ, ನಿನ್ನ ಮನಸ್ಸಿಗೆ ಬಂದಷ್ಟು ಹಣವನ್ನು ಕರುಣಿಸು.'

'ವನಿತೆಗೆ ಇಪ್ಪತ್ತು ಸಾವಿರ, ಈ ಹುಡುಗನಿಗೆ ಇಪ್ಪತ್ತು ಸಾವಿರವನ್ನು ಕೊಡುತ್ತೇನೆ.'

'ನಮ್ಮ ತೆರಕಾರನಿಗೆ ಹಣ ಸಂದಾಯವಾಯಿತು ಎಂದು ಹೇಳಿಸಿ' ಎಂದು ಹರಿಶ್ಚಂದ್ರನು ಕೇಳಿಕೊಳ್ಳಲು, ವಿಪ್ರನು ತೆರಕಾರ ನಕ್ಷತ್ರಿಕನ ಬಾಯಿಂದ 'ಹಣ ಸಂದಾಯವಾಯಿತು' ಎಂದು ಹೇಳಿಸಿದನು.

ಸ್ವಲ್ಪ ಉಸಿರಾಡುವಂತಾದ ಹರಿಶ್ಚಂದ್ರನು ನಕ್ಷತ್ರಿಕನನ್ನು ಉದ್ದೇಶಿಸಿ ಕೇಳಿದನು.

'ನಕ್ಷತ್ರ ಮುನಿಯೇ, ಹಣ ಬಂದು ಸೇರಿತೆ?'

**ಬಂದ ದಿನ ಮೊದಲಿಂದು ತನಕೆನ್ನ ಹಿಂದುಳಿದ ಬತ್ತಾಯ ಬಂದುದು**

'ಏನು ಬಂದಿತು? ನಾನು ಬಂದ ದಿನದಿಂದ ಮೊದಲುಗೊಂಡು ಈ ತನಕ ನನ್ನ ಬಾಕಿ ಬತ್ತಾಯವು ಬಂದಿತು. ನನ್ನ ಗುರುಗಳಿಗೆ ಕೊಡಬೇಕಾಗಿರುವ ರಾಶಿ ಹೊನ್ನನ್ನು ಈಗ ತಂದುಕೊಡು. ಕೊಡದಿದ್ದರೆ ಇಲ್ಲ ಎಂದು ಹೇಳು. ಈ ಹೊನ್ನನ್ನು ನನ್ನ ಭತ್ಯೆಗೆ ಹೊಂದಿಸಿಕೊಳ್ಳುವೆನು.'

ಈ ನುಡಿ ಕೇಳಿ ದಿಗ್ಭ್ರಾಂತನಾದ ಹರಿಶ್ಚಂದ್ರನು ಎದುರಿಗಿರುವ ವಿಪ್ರನಿಗೆ ನ್ಯಾಯವನ್ನು ಒಪ್ಪಿಸುವ ರೀತಿ ಹೇಳಿಕೊಂಡನು.

'ತಾತ, ಈತನು ಈ ಹಣವನ್ನು ಪಡೆಯುವುದು ಉಚಿತವೆ ಹೇಳು. ಪಕ್ಷಪಾತವಿಲ್ಲದೆ ನುಡಿ.'

'ಆನೆಗಿಂತ ಎತ್ತರದ ಹೊನ್ನ ರಾಶಿಯ ಸಾಲವನ್ನು ನೀನು ಕೊಡಬೇಕಾಗಿರುವಾಗ ಇದು ಈತನಿಗೆ ಸಲ್ಲುವ ಮರ್ಯಾದೆ!'

**ಜಲಜವನುಳಿದಬುಜಕಾ ತರಣಿ ಮುನಿವನೆನೆ ನೆಲೆಗೆಟ್ಟು ಬಂದವರ್ಗೆ ಮುನಿಯದ ವರಾರು?**

ವಿಪ್ರನ ಮಾತು ಕೇಳಿ ಬೆಚ್ಚಿಬಿದ್ದ ಹರಿಶ್ಚಂದ್ರನು, ನೊಂದು ಹೇಳಿದನು,

'ನೀರಿನಿಂದ ಹೊರಕ್ಕೆಬಂದ ಕಮಲಕ್ಕೆ ಸೂರ್ಯ ಮುನಿವನು ಎಂಬಂತೆ ನೆಲೆಗೆಟ್ಟು ಬಂದವರಿಗೆ ಮುನಿಯದವರಾರು?'

'ರಾಜನೇ, ನಾನು ಸರಿಕಂಡದ್ದನ್ನು ವಿನಯದಿಂದ ಹೇಳಿದೆ. ನಾನು ಕೋಪಗೊಂಡಿರುವೆ ಎಂದು ಹೇಳುತ್ತಿರುವ ನೀನು–ನನ್ನ ಮೇಲೆ ಮುನಿಸಿಕೊಂಡು ಮಾಡುವುದೇನಿದೆ? ನನ್ನ ಒಡವೆಯನ್ನು ತೆಗೆದುಕೊಂಡು ಹೋಗುತ್ತೇನೆ' ಎಂದು ಹೇಳಿದ ವಿಪ್ರವೇಶದ ಅಗ್ನಿಯು ರಾಣಿ ಚಂದ್ರಮತಿ ಮತ್ತು ಮಗ ಲೋಹಿತಾಶ್ವರ ಕಡೆ ನೋಡುತ್ತ,

'ಹೇ ಹೆಣ್ಣೆ, ಅಪ್ರಯೋಜಕಳೇ! ಮನೆಯ ಕೆಲಸಕ್ಕೆ ನಡೆ, ಎಲ್ಲವೋ ಹುಡುಗ ಹುಲ್ಲು ಹುಳ್ಳಿ ತರಲು ಕಾಡಿಗೆ ಹೋಗು' ಎಂದು ಗದರಿಸಿದನು. ಆಗ ಲೋಹಿತಾಶ್ವನು ತಂದೆಯನ್ನು ನೋಡುತ್ತ,

'ಹೋಗುತ್ತೇನೆ ತಂದೆ ಬೊಪ್ಪಯ್ಯ' ಎಂದು ಪ್ರೀತಿಯಿಂದ ಅಪ್ಪನನ್ನು ಅಪ್ಪಿಕೊಂಡು ಒಂದೇ ಸಮನೆ ಅತ್ತನು. ಕಾಲಿಗೆ ಎರಗಿ ತಲೆಬಾಗಿ ನಿಂತ ಪತ್ನಿ ಅಗಲಿಕೆಯನ್ನು ನೆನೆದು ಮೂಕಳಾಗಿದ್ದಳು. ಅವರನ್ನು ಕಂಡು ಕರುಳು ಕಿತ್ತುಬಂದಂತಾಗಿ ಹರಿಶ್ಚಂದ್ರನು ಗದ್ಗದಿತನಾದನು.

**ಕಡೆಹೊಯ್ದು ನೂಕಿ ನಿಜಗೇಹಕ್ಕೆ ಜರೆಯುತ್ತ ಕರೆದೊಯ್ದನು**

ವಿಪ್ರವೇಷದ ಅಗ್ನಿಯು,

'ಕೊಂಡ ಒಡೆಯನು ನಾನಿರಲು, ಮಾರಿದವನನ್ನು ಕೇಳುವ ಸಾಹಸ ನೋಡು!' ಎಂದು ಹೇಳುತ್ತ, ಬೀಳುವಂತೆಗುದ್ದಿ ಹೊಡೆಯುತ್ತ, ಜರಿದು ಮಾತಾಡುತ್ತ, ದಬ್ಬುತ್ತ ಅವರಿಬ್ಬರನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅವನ ವರ್ತನೆಯು–ರಾಜ ಮರುಗಿ ಪ್ರತಿಕ್ರಿಯಿಸಲಿ ಎಂಬಂತೆ ತೀವ್ರತರವಾಗಿತ್ತು!

**ಹರಿಶ್ಚಂದ್ರನಂ ಮಾರುಗೊಂಡೋಲೈಸಿ ಕೊಂಬರಿಲ್ಲಾ**

ರಾಜ ಹರಿಶ್ಚಂದ್ರನು ಮಂತ್ರಿಯನ್ನುದ್ದೇಶಿಸಿ, ತನ್ನ ಮನದ ತುಮುಲವನ್ನು ಹೀಗೆ ವ್ಯಕ್ತಪಡಿಸಿದನು.

'ಮಂತ್ರಿಯೇ, ನಾನು ಯುದ್ಧದಲ್ಲಿ ಹೋರಾಡಿ ಸೋಲದೆ, ಜೂಜಾಡಿ ಸೋಲದೆ ಸವಿಸ್ತಾರವಾದ ಸಿರಿ ಹೋಯ್ತು, ಪುರ ಹೋಯ್ತು, ಪರಿವಾರ ಹೋಯ್ತು, ನಿಷ್ಕಾರಣವಾಗಿ ಹೆಂಡತಿ ಮಗ ಹೋದರು. ಉರಿಮಾರಿಯಾದ ಸಾಲದ ಅವಧಿ ತೀರುತ್ತ ಬಂದಿದೆ. ಇನ್ನು ಯಾವ ರೀತಿ ಋಣವನ್ನು ತೀರಿಸಿ ಶುದ್ಧನಾಗುವುದು? ಪ್ರಾಚೀನ ದುಷ್ಕರ್ಮವು ನನ್ನನ್ನು ಬಿಡದೆ ಹಿಂಸೆಯನ್ನು ಕೊಡುತ್ತಿದೆ. ಇನ್ನೇನು ಗತಿ?"

'ಪ್ರಭುವೇ, ಸಂಗ್ರಾಮದಲ್ಲಿ ಈರೇಳು ಲೋಕದ ಅರಸುಗಳನ್ನು ಜಯಿಸಿ, ಸಪ್ತಾಂಗವನ್ನು ಪಡೆಯುವ ಸಾಮರ್ಥ್ಯಶಾಲಿ ನೀನು. ಬಡಮುನಿಯು ನಿನ್ನನ್ನು ನುಡಿಯ ತೊಡಕಿನ ಬೆಡಗಿನಿಂದ ಸೋಲಿಸಿ, ಸಮಸ್ತ ರಾಜ್ಯವನ್ನು ಪಡೆದುಕೊಂಡನು. ಅದರ ಮೇಲೆ ಸಾಲವನ್ನು ಹೊರಿಸಿದನು. ಇದು ನಿನ್ನ ದೈವಿಕ ದುಷ್ಕರ್ಮ ಅಲ್ಲ. ಈಶ್ವರನು ಇದೆಲ್ಲವನ್ನು ಗಮನಿಸುತ್ತಿರುತ್ತಾನೆ. ಧೈರ್ಯಗೆಡದೆ ನಡೆ. ಲೇಸುಂಟಾಗುವುದು ಅಂಜಬೇಡ' ಎಂದು ಮಂತ್ರಿ ಸತ್ಯಕೀರ್ತಿಯು ಧೈರ್ಯ ಹೇಳಿದನು. ಆಗ ರಾಜ ಹರಿಶ್ಚಂದ್ರನು ತನ್ನ ತಲೆಗೆ ಹುಲ್ಲು ಕಟ್ಟಿಕೊಂಡು,

'ಸೂರ್ಯವಂಶದ ಇಕ್ಷ್ವಾಕು ಭೂವರಸ ಪೀಳಿಗೆಯಲ್ಲಿ ತ್ರಿಶಂಕು ತುಂಬಾ ಹೆಸರುವಾಸಿಯಾದ ರಾಜ. ಅವನ ಹಿರಿಯ ಮಗನಾದ ನಾನು ಹರಿಶ್ಚಂದ್ರ ನನ್ನನ್ನು ಮಾರಿಕೊಳ್ಳಲು ಬರುತ್ತಿದ್ದೇನೆ. ಸೇವಕನನ್ನಾಗಿ ಕೊಳ್ಳಬಹುದು' ಎಂದು ಬಗೆ ಬಗೆಯಾಗಿ ಹೇಳುತ್ತಾ ಕಾಶೀಪುರದ ಕೇರಿ, ಬೀದಿ, ಅಡ್ಡ ಬೀದಿಗಳಲ್ಲಿ ನಿಂತ ಗುಂಪುಗಳ ಜನರಿಗೆ ಕೇಳುವಂತೆ – ಮಧ್ಯಾಹ್ನದಿಂದ ಸಂಜೆಯ ತನಕ ಅಲೆದಾಡಿದನು.

ನನ್ನನ್ನು ಕೊಳ್ಳುವ ಮಾತಿರಲಿ, ಕೇಳುವವರೂ ಇಲ್ಲ. ಯಾರನ್ನಾದರೂ ಕೇಳಿದರೆ ಅದಕ್ಕೆ ಪ್ರತಿನುಡಿಯುವವರಿಲ್ಲ. ಹೊಸಬರೆಂದು ತಿರುಗಿ ನೋಡುವವರಿಲ್ಲ. ಕೂಗಿಕೊಂಡರೂ ಆಲಿಸುವವರಿಲ್ಲ. ಇನ್ನು ಕಡೆಯಲ್ಲಿ ಅರೆಜಾವದ ಅವಧಿ ಮಾತ್ರ ಉಳಿದಿದೆ. ಅದು ತಪ್ಪಿದ ನಂತರ ಎಷ್ಟು ಪಟ್ಟು ದ್ರವ್ಯವನ್ನು ಕೊಟ್ಟರೂ, ಮುನಿಯು ಹಂಗಿಸುತ್ತ ಕಠೋರವಾಗಿ ನಡೆದುಕೊಳ್ಳುವನು, ಈಗೇನು ಮಾಡಲಿ ಎಂದು ಚಿಂತಿಸುತ್ತ,

ಬೀದಿ ಬೀದಿಯಲ್ಲಿ ತನ್ನನ್ನು ಕೊಂಡುಕೊಳ್ಳಿ ಎಂದು ಹೇಳುತ್ತ ಹರಿಶ್ಚಂದ್ರನು ಸಾಗಿದನು.

ಇತ್ತ ಕೌಶಿಕಮುನಿಯು - ನನ್ನ ಕನ್ನಿಕೆಯರನ್ನು ಮದುವೆಯಾಗು ಎಂದರೆ, ಹೊಲತಿಯರನ್ನು ಒಲ್ಲೆನು ಎಂದನು. ಈ ಅಣ್ಣನನ್ನು ಕಡೆಗೆ ಅನಾಮಿಕನ ಸೇವಕನನ್ನಾಗಿ, ಸ್ಮಶಾನ ಕಾಯುವಂತೆ ಮಾಡುತ್ತೇನೆ ಎಂದು ನಿರ್ಧರಿಸಿದನು. ಅದಕ್ಕಾಗಿ ಯಮನನ್ನು ಕರೆದು,

'ನೀನು ಅನಾಮಿಕ ವೇಷಾಂತರ ಹೊಂದಿ, ಧನವನ್ನು ನೀಡಿ ಅರಸನನ್ನು ಕೊಂಡುಕೊ' ಎಂದು ಆದೇಶಿಸಿದನು.

**ಬಿಡದೆ ಢರ‍್ರನೆ ತೇಗಿ ನೆರವಿಯಂ ಬಯ್ವ ಬಿರುನುಡಿಯ ಕಲಿ ವೀರಬಾಹುಕ**

ಯಮನು ವಿಶ್ವಾಮಿತ್ರನ ಆಜ್ಞೆಯಂತೆ ಚಂಡಾಲ ವೇಷದಲ್ಲಿ -ಕೈಯಲ್ಲಿ ಸಂಬಳಿ ಕೋಲು ಹಿಡಿದು, ಕಪ್ಪು ಶರೀರದಲ್ಲಿ ಕೆಂಗಣ್ಣುಗಳನ್ನು ಹೊಂದಿದ ವೀರಬಾಹುಕನಾಗಿ ಅಲ್ಲಿಗೆ ಬಂದನು! ಕುಡಿದು ಕೊಬ್ಬಿದ ಹೊಟ್ಟೆ, ಕೆದರಿದ ತಲೆಯನ್ನು ಸುತ್ತಿದ ತೊಗಲ ಪಟ್ಟಿಯಲ್ಲಿ, ದಡ ದಡಿಸಿ ತತ್ತರಿಸಿ ಹೆಜ್ಜೆಯಿಡುತ್ತ ಬಂದನು! ಬಿಡದೆ ಡರ‍್ರನೆ ತೇಗಿ ಸುತ್ತಮುತ್ತಲ ಜನರನ್ನು ಬೈಯುತ್ತ ಅವನು ಬರುತ್ತಿದ್ದ ರೀತಿ ಬೀಭತ್ಸವಾಗಿತ್ತು!

ಹರಿಶ್ಚಂದ್ರನನ್ನು ನೋಡಿದ ಅವನು ತನ್ನ ಹಡಪದವನ ಕೈಯಲ್ಲಿ 'ಮಾರುವುದಾದರೆ ಕೊಂಡು ಹೋಗುತ್ತೇನೆ. ಹೊನ್ನನ್ನು ಕೊಡುತ್ತೇನೆ' ಎಂದು ಹೇಳಿ ವಿಚಾರಿಸಿದನು.

'ಕೊಡುವಾತನು ಯಾರು? ಬೆಲೆಯೇನು? ಮಾರಿಸಿಕೊಳ್ಳುವ ಪೊಡವೀಶ ಎಂಬುವವನು ಯಾರು? ವೀರಬಾಹುವಿಗೆ ಹೇಳಿದರೆ ಈಗಲೇ ಕೊಂಡುಕೊಳ್ಳುವನು' ಎಂದು ಹಡಪದವನು ಹೇಳಿದನು.

**ಮೆಣಸು ಹುಳಿತಡೆ ಜೋಳದಿಂ ಕುಂದೆ**

ರಾಜನು ಆಶ್ಚರ್ಯಚಕಿತನಾಗಿ-ಸೂರ್ಯವಂಶದಲ್ಲಿ ಹುಟ್ಟಿ, ವಸಿಷ್ಠ ಮುನಿಯ ಕರುಣೆಯನ್ನು ಪಡೆದ ನನ್ನನ್ನು ಈ ಚಂಡಾಲನು ಕೊಂಡುಕೊಳ್ಳುವೆನೆಂದು ನುಡಿಯುವ ಧಾರ್ಷ್ಟ್ಯವನ್ನು ನೋಡು ನೋಡೆಂದು-ತನಗೆ ತಾನೆ ಅಂದುಕೊಂಡು ಅತಿ ಕೋಪಗೊಂಡನು. ಪ್ರಕಟವಾಗಿ.

'ಅಕಟಕಟ! ಅಯ್ಯೊ! ಹಡಪಿಗನು ನಡುಗದೆ, ಅಂಜದೆ, ಹಿಂಜರಿಯದೆ ತನ್ನ ಮಿತಿ ಮೀರಿ ಬಂದು- ತನ್ನ ಒಡೆಯನಿಗೆ ದಾಸನಾಗು ಎಂದು ಹೇಳುತ್ತಿದ್ದಾನೆ. ಇದೇನು ಕಾಲಗುಣವೋ, ತನ್ನ ಕರ್ಮಫಲವೋ ತಿಳಿಯದಾಗಿದೆ. ಮೆಣಸು ಹುಳಿತರೆ ಜೋಳಕ್ಕಿಂತಲೂ ಕಳಪೆಯೆ? ನೋಡು! ನೋಡು! ಎಂದು ಘುಡುಘುಡಿಸಿ ಹಡಪಿಗನನ್ನು ಗದರಿಸಿದನು. ಆಗ ವೀರಬಾಹುಕನು ರಾಜನಿಗೆ ಹೇಳಿದನು.

'ಕೇಳಲು ಬಂದರೆ ಜರೆಯುವುದೇಕೆ?'

'ನಾನು ಹೇಳಿದ್ದು ನಿನ್ನ ಹಡಪದವನಿಗೆ. ನಾನು ಯಾರೆಂದು ತಿಳಿದೂ ತಿಳಿದೂ ಅನಾಮಿಕನಿಗೆ ಆಳಾಗುವೆಯ ಎಂದು ಕೇಳಿದನು. ಕೀಳು ಮೇಲೆಂಬುದನ್ನು ನೋಡದೆ ಹೀಗೆ ಕೇಳಬಹುದೆ?'

**ಹದುಳಿಪ್ಪ ನಾನು ಚಾಂಡಾಳನೋ ಹುಸಿಯ ಹೊಲೆಯಂ ಹೊರುವ ನೀನು ಚಾಂಡಾಳನೋ?**

'ಕೀಳಾರು? ಮೇಲಾರು? ತೃಪ್ತಿಯಿಂದ ಸುಖವಾಗಿರುವ ನಾನು ಚಂಡಾಲನೋ, ಹುಸಿಯ ಹೊಲೆಯನ್ನು ಹೊರುವ ನೀನು ಚಂಡಾಲನೋ?'

'ನಾನೀಗ ಯಾವ ಸುಳ್ಳಾಡಿದೆ?'

'ನೀನು ಹೊನ್ನುಳ್ಳ ಧನಿಕರು ಯಾರಾದರೂ ಕೊಳ್ಳುವವರು ಬನ್ನಿ. ನನ್ನನ್ನು ಮಾರುಗೊಡುವೆ ಎಂದು ಹೇಳಿದೆ. ನಾನು ಸತ್ಯವೆಂದು ತಿಳಿದು ಕೇಳಿದೆ. ಉತ್ತಮ ದ್ವಿಜರು ಮಾತ್ರ ಕೊಳ್ಳುವುದೆಂದು ಈ ಮೊದಲು ನೀನು ಹೇಳಿರುವೆಯಾ ಭೂಪಾಲ?' ಎಂದು ಸೂಕ್ಷ್ಮ ಪ್ರಶ್ನೆಯನ್ನು ರಾಜನಿಗೆ ಎಸೆದ ವೀರಬಾಹುಕನು 'ನಿನ್ನ ನುಡಿ ನಿನಗೆ ಹಗೆಯಾಯ್ತು. ನೀನು ಹೊಲೆ. ಹುಸಿಯನ್ನು ಹೊರುವವನು ಹೊಲೆಯನಲ್ಲದೆ ಮತ್ತಾರು? ನಿನ್ನೊಡನೆ ಮಾತಾಡಿ ನಾನೇಕೆ ದೋಷವನ್ನು ಹೊರಲಿ?' ಎಂದು ಹೇಳಿ ಹಿಂದಿರುಗಿದನು.

ಹರಿಶ್ಚಂದ್ರನು ಅಚ್ಚರಿಗೊಳಗಾಗಿ 'ಭಾಪುರೆ! ವಿಧಿಯ ಆಟ ವಿಚಿತ್ರ! ಕೌಶಿಕ ಮುನೀಶ್ವರನಿಗೆ ಮೊದಲಾಗಿ, ಅನಾಮಿಕನ ತನಕ ಸಮಸ್ತರ ಮನಸ್ಸಿಗೆ ಸತ್ಯನೆಂದೆನಿಸುವೆನು' ಎಂದು ನಿರ್ಧರಿಸಿ 'ಹಣ ಉಳ್ಳವರು ನನ್ನನ್ನು ಕೊಂಡುಕೊಳ್ಳ ಬಹುದೆಂದು ಹೇಳಿ ನಾನು ಹೀಗೆ ಹಿಂಜರಿದರೆ ಸುಳ್ಳು ಹೇಳಿದಂತಾಗುವುದು. ಅವಧಿ ತಪ್ಪಿದರೆ, ನಾನು ಹಿಂದೆ ಕೌಶಿಕಮುನಿಗೆ ದಾನವಾಗಿ ನೀಡಿದ್ದ ರಾಜ್ಯ ನಿರರ್ಥಕವಾಗಿ ಕೈತಪ್ಪಿ ಹೋಗುತ್ತದೆ. ಅದರ ಜೊತೆಗೆ ಸುಳ್ಳನ್ನು ಹೊತ್ತುಕೊಳ್ಳ ಬೇಕಾಗುತ್ತದೆ. ಹಾಗಾಗುವ ಮೊದಲೇ ಅನಾಮಿಕನ ಮನಸ್ಸನ್ನು ಗೆಲ್ಲುವೆನು' ಎಂಬ ಅಭಿಪ್ರಾಯಕ್ಕೆ ಬಂದು ಪ್ರೀತಿಯಿಂದ ವೀರಬಾಹುಕನನ್ನು ಕರೆದನು.

ಆಗ ವೀರಬಾಹುಕನು ಹಿಂದಿರುಗಿ ನೋಡುತ್ತ ಕೇಳಿದನು.

'ಹುಸಿಯ ಹೊಲೆ ಹೊತ್ತವನೆ, ಮತ್ತೇಕೆ ಕರೆಯುವೆ?'

'ಹೊತ್ತ ಸಾಲದ ಭರದಲ್ಲಿ ನಾನು ತಿಳಿಯದೆ ಆಡಿದ ನುಡಿಗೆ ಹೊತ್ತ ಹುಸಿಯು ಅಳಿಯಬೇಕಾಗಿದೆ'

'ನಿನ್ನ ಕುಲವು ಅಳಿಯದೆ, ಹುಸಿ ಅಳಿಯದು'

**ನಾಡಮದ್ದಂ ತಿಂದು ಕುತ್ತ ಕೆಡದಿರಬಹುದೆ**

'ಮನಸಿಟ್ಟು ಕೇಳು, ನಾಟಿಮದ್ದನ್ನು ತಿಂದರೆ ರೋಗ ವಾಸಿಯಾಗದಿರುತ್ತದೆಯೆ?

ಸಾಲವು ತೀರಲು ಹಣವನ್ನು ಕೊಟ್ಟು ನನ್ನನ್ನು ಕಾಪಾಡು. ಇಂದು ರವಿಕುಲಕ್ಕೆ ಕುಂದು ಬಂದರೂ ಬರಲಿ.'

'ನೂರು ಸಾವಿರವೆ? ಸಾಲ ಎಷ್ಟು?'

'ಆನೆಯನ್ನು ಏರಿ ಮೇಲಕ್ಕೆ ಕವಡೆಯನ್ನು ಮಿಡಿದರೆ ಅದು ಎಷ್ಟು ಎತ್ತರಕ್ಕೆ ಚಿಮ್ಮುವುದೊ ಅಷ್ಟು ಎತ್ತರದ ಹೊನ್ನ ರಾಶಿಯನ್ನು ಕೊಡಬೇಕು.'

'ಆಗಲಿ. ಅಷ್ಟು ಧನವನ್ನು ಕೊಡುತ್ತೇನೆ. ನೀನು ಮಾಡುವ ಕೆಲಸ ಏನು ಎಂಬುದನ್ನು ಹೇಳು.'

'ಯಾವ ಹೊತ್ತಿನಲ್ಲಿ ಯಾವ ಕೆಲಸವನ್ನು ಹೇಳಿದರೂ ಆಗದು ಎಂಬ ಮಾತಾಡದೆ ಮಾಡುತ್ತೇನೆ.'

'ಈಗಲೇ ಕೊಡುತ್ತೇನೆ.'

ಒಬ್ಬರೊಬ್ಬರಿಗೆ ನಂಬುಗೆಯ ಮಾತಾದ ನಂತರ ವೀರಬಾಹುವು ಒಡೆಯನಾದನು. ಹರಿಶ್ಚಂದ್ರನೃಪನು ಆಳಾದನು.

ಆನೆಯನ್ನು ಏರಿ ಕವಡೆ ಮಿಡಿದಷ್ಟು ಧನವನ್ನು ವೀರಬಾಹುಕನ ಸೇವಕರು ಹೆಡಗೆಗಳಲ್ಲಿ ತಂದು ಸುರಿದರು. ಅದನ್ನು ನೋಡಿ ಕೌಶಿಕಮುನಿಯ ತೆರಕಾರ ನಕ್ಷತ್ರಿಕನು ಆಶ್ಚರ್ಯ ಚಕಿತನಾದನು!

ಕೊಡುವ ಕೊಳ್ಳುವ ಅವರಿಬ್ಬರನ್ನು ನೋಡಿದರೆ ಎದುರು ಬದುರು ನಿಂತ ರವಿ ಶಶಿಗಳಂತೆ ಕಾಣುತ್ತಿದ್ದು; ಅವರಿಬ್ಬರ ನಡುವಣ ಹೊನ್ನರಾಶಿ ಮೇರುಗಿರಿಯಂತೆ ಕಂಡಿತು!

ಹರಿಶ್ಚಂದ್ರನು ನಕ್ಷತ್ರಿಕನ ಕಡೆ ನೋಡುತ್ತ,

'ಮುನಿಯೇ, ಗಮನಹರಿಸು. ಕೊಟ್ಟ ಅವಧಿಗೆ ಇನ್ನೂ ಎರಡುಗಳಿಗೆ ಹೊತ್ತಿದೆ. ಮಾತು ಕೊಟ್ಟಂತೆ ಹಣವನ್ನು ನೀಡಿದ್ದೇನೆ. ಇದು ನಿನಗೆ ತಲುಪಿತು ಎಂದು ಹೇಳು. ತಂದೆ, ನಾನು ಸುಳ್ಳು ಹೇಳಲಿಲ್ಲ ಅಲ್ಲವೆ? ನಿಮ್ಮನ್ನು ಆಯಾಸಪಡಿಸಿದ, ಸಂಕಟಪಡಿಸಿದ ಮೂಢ ನಾನು. ನನ್ನ ತಪ್ಪುಗಳನ್ನು ಮರೆತು ತಮ್ಮ ಉದಾರ ಗುಣದಿಂದ ಕರುಣಿಸಿ. ಈ ವಿಷಯವನ್ನು ಕೌಶಿಕಮುನಿಗೆ ತಿಳಿಸಿ' ಎಂದು ರಾಜನು ಕೈಮುಗಿದು ಕೇಳಿಕೊಂಡನು. ಅದಕ್ಕೆ ಉತ್ತರವಾಗಿ ನಕ್ಷತ್ರಿಕನು,

'ಭೂಪಾಲನೇ, ನುಡಿ ನುಡಿದು ನನ್ನನ್ನೇಕೆ ನಾಚಿಸುವೆ? ನಿನ್ನಂತೆ ಸತ್ಯವಂತರು, ಉತ್ತಮರು, ಶಿವಧ್ಯಾನಿಗಳು ಈ ಜಗತ್ತಿನಲ್ಲಿಲ್ಲ. ನಿನ್ನ ಇಷ್ಟಸಿದ್ಧಿಯು ಕೈಗೂಡಲಿ' ಎಂದು ಮನಉಕ್ಕಿ ಹರುಷದಿಂದ ಹಾರೈಸಿದನು. ಅನಂತರ ಹೊನ್ನನ್ನು ತೆಗೆದುಕೊಂಡು ಹೋಗುವ ವ್ಯವಸ್ಥೆಯಲ್ಲಿ ತೊಡಗಿದನು.

**ರವಿಕುಲನ ಹೆಗಲಮೇಲೆಲೆಲೆ ನೀಡಿದನು ಕಾಲಂ**

ಇತ್ತ ಸತ್ಯವಂತ ಹರಿಶ್ಚಂದ್ರನು ತನ್ನ ಪತಿಯಾದ ವೀರಬಾಹುಕನ ಹಿಂದೆ ಹೊಲಗೇರಿಯತ್ತ ನಡೆದನು. ಅದನ್ನು ನೋಡಿ ದೇವತೆಗಳು ಜಯಕಾರ ಮಾಡಿದರು.

ವೀರಬಾಹುಕನ ಮನೆಯ ಹೊರಗೆ ಹಸಿಯ ತೊಗಲನ್ನು ಹರಡಿದ್ದು, ನೊಣ ಮುತ್ತಿದ್ದವು. ಅಲ್ಲಿ ನಾನಾ ಪ್ರಾಣಿಗಳನ್ನು ಕಡಿಯುವ, ಕೊಚ್ಚುವ, ಸೀಳುವ ಕೆಲಸ ನಡೆದಿತ್ತು. ಹೊಟ್ಟೆ ಬಗೆದು ತೆಗೆದ ಕರುಳು, ಗೋಡೆಗೆ ಸಿಡಿದ ರಕ್ತದ ಕಲೆಗಳು ಹೇಸಿಕೆ ತರುತ್ತಿದ್ದವು.

ವೀರಬಾಹುಕನು ಹಲವು ಎಲುವುಗಳನ್ನು ನರಗಳಹಗ್ಗದಿಂದ ಬಿಗಿದು ತಯಾರಿಸಿದ ತೊಗಲ ಹಾಸಿಗೆಯ ಮಂಚದಮೇಲೆ ಕುಳಿತನು. ಹರಿಶ್ಚಂದ್ರನು ಅವನ ಬಳಿ ನೆಲದಮೇಲೆ ಕುಳಿತುಕೊಂಡನು. ತಲೆಯೋಡಿನಲ್ಲಿ ತುಂಬಿದ ಹಸಿಯ ಗೋಮಾಂಸವನ್ನು ತಿನ್ನುತ್ತ ಹೆಂಡವನ್ನು ಕುಡಿಯುತ್ತಿದ್ದ ವೀರಬಾಹುಕನು ಹರಿಶ್ಚಂದ್ರನ ಹೆಗಲಮೇಲೆ ಕಾಲುಗಳನ್ನು ಚಾಚಿದನು.

ಸಪ್ತಪರ್ವತಗಳಿಂದ ಕೂಡಿದ ಸಕಲ ರಾಜ್ಯಶ್ರೀಯ ವೀರಸಿರಿ, ವಿಜಯ ಸಿರಿಯನ್ನು ಹೊರುವ ಸಾಮರ್ಥ್ಯವುಳ್ಳ ಭುಜವು ಅನಾಮಿಕನ ಪದಭಾರಕ್ಕೆ ಬಳಲುತ್ತದೆಯೆ? ಯುದ್ಧದಲ್ಲಿ ವೈರಿರಾಜರ ಖಂಡ, ರಕ್ತ, ಕರುಳ ಸರವನ್ನು ಸೆಳೆಯುವ ಕತ್ತಿಯನ್ನು ಪಡೆದಿರುವ ರಾಜನು ಈ ಹೇಯಕ್ಕೆ ಹೇಸುವನೆ ಎಂಬಂತೆ ಹರಿಶ್ಚಂದ್ರನು ಯಾವುದನ್ನು ಲೆಕ್ಕಿಸದೆ ಮೌನದ ಮುದ್ರೆಯಾಗಿದ್ದನು. ಅದನ್ನು ಕಂಡ ವೀರಬಾಹುಕನು,

'ಎಲವೋ, ನೀನು ದಿಟವಾಗಿ ರಾಜನಾಗಿದ್ದರೆ ಹೀಗೆ ಅಳುಕದೆ ಬಂದು ನೆಲದಲ್ಲಿ ಕುಳಿತುಕೊಳ್ಳುತ್ತಿದ್ದೆಯಾ? ಸತ್ಕುಲಜನಾಗಿದ್ದರೆ ಚಂಡಾಲನಾದ ನನ್ನ ಕಾಲನ್ನು ಒತ್ತುತ್ತಿದ್ದೆಯಾ? ಸಾತ್ವಿಕ ಶಿವಾರ್ಚಕನಾಗಿದ್ದರೆ ಹೊಲಸಿಗೆ ಹೇಸದೆ ಇರುತ್ತಿದ್ದೆಯಾ? ರಾಜ್ಯಸಿರಿ ತೊಲಗಿದರೂ ಪೂರ್ವಗುಣಗಳು ಅಳಿಯುವುವೆ? ನೀನು ಅರಸನಲ್ಲ! ಯಾವನೋ ಭವಿಯ ಮನೆಯಲ್ಲಿ ತಲೆತಗ್ಗಿಸಿ ದುಡಿದ ದಡ್ಡನಾಗಿರಬೇಕು!'

'ಒಡೆಯನೇ, ನೀನು ಹಸುವನ್ನು ಕತ್ತರಿಸು, ಬ್ರಾಹ್ಮಣನನ್ನು ಕೊಲ್ಲು, ಮಾತಾ ಪಿತರನ್ನು ಮರ್ದಿಸು, ಸುತನನ್ನು ತಿವಿ, ಸತಿಯನ್ನು ಕೊಲ್ಲು ಎಂದು ಆಜ್ಞೆಮಾಡಿದರೆ ಅದನ್ನು ಪಾಲಿಸಬೇಕು. ವಿಷವನ್ನು ಕುಡಿ, ಹಾವನ್ನು ಹಿಡಿ, ಹುಲಿಯನ್ನು ಎದುರಿಸು, ದಳ್ಳುರಿಯಲ್ಲಿ ಅಡಗು ಎಂದು ಆದೇಶಿಸಿದರೆ ಆಗದು ಎಂದು ಹೇಳಬಾರದು. ಹಾಗಿರುವಾಗ ನೀವು ತೋರುವ ಅಲಕ್ಷ್ಯಕ್ಕೆ ನಾನು ಸೆಡೆಯಬಹುದೆ? ಕೊಟ್ಟ ಮಾತನ್ನು ನಡೆಸುವೆನೆಂದು ಹೇಳಿರುವ ನನ್ನ ನುಡಿ ಸಡಿಲವಾಗದೆ?'

'ನಾನು ಏನು ಅಪ್ಪಣೆ ಮಾಡಿದರೂ ಅದನ್ನು ತಪ್ಪದೆ ನಡೆಸುವೆಯಾ?'

'ಪ್ರಭುವೇ, ಖಂಡಿತ ನಡೆಸುವೆ, ನೀನು ಕೊಟ್ಟಿರುವ ಹಣ ದಾನವೆ? ಆನೆಯನ್ನು ಹೂಳುವಷ್ಟು ಧನವನ್ನು ನೀಡಿದ ಮೇಲೆ ನಾನು ನಿನ್ನ ಆಜ್ಞೆಗೆ ತಕ್ಕಂತೆ ನಡೆದುಕೊಳ್ಳದಿದ್ದರೆ– ಈ ನೆಲ ನನ್ನನ್ನು ಹೊರುವುದೆ? ನಾನು ಕೊಟ್ಟ ನಂಬಿಕೆಗೆ ಹಾನಿಯಾಗುವುದಿಲ್ಲವೆ?"

**ಸುಡುಗಾಡನಾನಂದದಿಂ ಕಾದುಕೊಂಡಿರುತಿರು**

'ಸರಿ ಸುಡುಗಾಡನ್ನು ಆನಂದದಿಂದ ಕಾದುಕೊಂಡಿರು'

'ಅಪ್ಪಣೆ ಒಡೆಯ. ಸ್ಮಶಾನಾಧಿಕಾರದ ನಿಯಮಗಳನ್ನು ತಿಳಿಸಿಕೊಡು.'

'ಅಲ್ಲಿ ಹೆಣವನ್ನು ಸುಡುವ ನೆಲದ ತೆರಿಗೆ ಮತ್ತು ಹೆಣದ ಉಡುಗೆಯನ್ನು ನನಗೆ ತಂದು ಕೊಡಬೇಕು. ತಲೆ ಅಕ್ಕಿಯನ್ನು ನಿನ್ನ ಸಂಬಳಕ್ಕೆ ಪಡಿಯಾಗಿ ಇಟ್ಟುಕೊಂಡು ಉಣ್ಣಬೇಕು. ಈ ಆದೇಶಕ್ಕೆ ಭಂಗ ತರದಿರು, ಹುಸಿಯದಿರು' ಎಂದು ಹೇಳಿ ವೀರಬಾಹುವು ವೀಳೆಯದ ಜೊತೆ ತಾನೂ ಹಿಡಿದ ಸಂಬಳಿಗೋಲನ್ನು ಅಧಿಕಾರ ಮುದ್ರೆಯಾಗಿ ಕೊಟ್ಟು, ಮತ್ತೆ ಸಲಹೆಯಾಗಿ ಹೀಗೆ ಹೇಳಿದನು.

'ನೀನು ಈಗ ಸ್ಮಶಾನ ಕಾಯುವ ಅಧಿಕಾರ ಹೊಂದಿರುವೆ ಎಂದು ಕಾಶೀಪುರದ ಜನರಿಗೆ ಗೊತ್ತಾಗಬೇಕಾಗಿದೆ. ಅದಕ್ಕಾಗಿ ನಿನ್ನ ಹೆಸರನ್ನು ಹೇಳುತ್ತ, ಸಾರುತ್ತ; ನಿನ್ನ ಗುರುತನ್ನು ತೋರಿಸುತ್ತ ಪುರದೊಳಗೆ ಹೋಗು. ಹರೆಯನ್ನು ಬಾರಿಸುತ್ತ, ಡಂಗುರ ಹೊಯ್ದು ಅದರ ಲಯಕ್ಕೆ ಕುಣಿಯುತ್ತ ಹೋಗು.'

**ಸಂಬಳಿ ಸಂಬಳೆಂದೆಂದು ಕೊಸರುತಿಹ ಬಾಯ್ವೆರಸಿ ಬೀದಿಬೀದಿಯೊಳು ಸುಳಿದಂ ಸತ್ಯಸಂಪನ್ನನು**

ಸತ್ಯಸಂಧನಾದ ಹರಿಶ್ಚಂದ್ರನು ನಸುಕುಸಿದ ದೇಹದಲ್ಲಿ ನಿಂತು,

ಕಂಕರಿಗೋಲನ್ನು ಹಿಡಿದು ಹರೆ ಬಾರಿಸುತ್ತ 'ಸಂಬಳಿ, ಸಂಬಳಿ' ಎಂದುಕೂಗಿ ಹೇಳುತ್ತ ನಡೆದನು.

'ಪುರಜನರೇ ಕೇಳಿರಿ. ಕೇಳಿರಿ. ನನಗೆ ಸುಡುಗಾಡಿನ ಅಧಿಕಾರ ಮುದ್ರೆ ದೊರೆತಿದೆ. ಕಟ್ಟಾಜ್ಞೆಯ ಪ್ರಕಾರ ಹೆಣದ ತಲೆಯಕ್ಕಿ, ನೆಲಕ್ಕಾಗಿ ಕೊಡಬೇಕಾದ ಸುಂಕ–ಹಾಗ, ಶವದುಡಿಗೆ ನನ್ನ ವಶಕ್ಕೆ ಬರಬೇಕು. ಇದನ್ನು ಮರೆತು ಯಾರಾದರೂ ರಾತ್ರಿಯಲ್ಲಿ ಹೆಣ ಸುಟ್ಟರೆ, ಸುಂಕವನ್ನು ಕೊಡದೆ ಇದ್ದರೆ ನನ್ನಾಣೆ! ವೀರಬಾಹುವಿನ ಮಡದಿಯರ ಪಾದದಾಣೆ! ಇದಕ್ಕೆ ತಪ್ಪಿ ನಡೆದರೆ ಅವರನ್ನು ಕೆಡಹಿ ಅಡ್ಡಗಟ್ಟುತ್ತೇನೆ' ಎಂದು ಕಾಶೀಪುರದ ಕೇರಿ ಕೇರಿಯಲ್ಲಿ ಹರೆಬಡಿದು ಪರಿಚಯಿಸಿಕೊಳ್ಳುತ್ತ, ಎರಡನೆಯ ರುದ್ರನೆನಿಸಿದ ವಸಿಷ್ಠನ ಶಿಷ್ಯನೂ, ರುದ್ರಾರ್ಚಕನೂ ಆದ ಹರಿಶ್ಚಂದ್ರನು ರುದ್ರಭೂಮಿಗೆ ಹೋದನು.

ಈ ಜಗತ್ತಿನಲ್ಲಿ ಸುಳ್ಳು ಹೇಳುವವನು ಹೊಲೆಯ, ಅವನನ್ನು ಮುಟ್ಟುವವರೆಲ್ಲ ಹೊಲೆಯರು ಎನ್ನುವರು. ಹಾಗಿರುವಾಗ ಯಾರನ್ನೂ ಮುಟ್ಟುವುದಿಲ್ಲ ಎಂದರೆ ಅದರಿಂದ ಎಲ್ಲ ಜನಗಳು ವೈರಿಗಳಾಗುವರು. ನಾನು ಹೊಲೆ ವೇಷವನ್ನು ಹೊತ್ತಿರಲು ಹೊಲೆಯನೆಂದು ಕಂಡವರೆಲ್ಲ ದೂರ ಹೋಗುವರು. ಇದೇ ತನಗೆ ಸರಿ ಎಂದು ರವಿಕುಲನು ಅನಾಮಿಕನ ವೇಷವನ್ನು ತಳೆದನು! ಅದನ್ನು ಅರಿತ ಉತ್ತಮರು ಮೆಚ್ಚಿ ಹರ್ಷದಿಂದ ತಲೆದೂಗಿದರು!

**ಹೊಕ್ಕನಾ ಸುಡುಗಾಡನವನೀಶನು**

ಕಣ್ಣಿಗೆ ಭಯ ಉಂಟಾಗುವಂತೆ ಬೇಯುವ ಹೆಣದ ಹಿಂಡುಗಳು. ಕವಿದ ಕರ್ಬೊಗೆಯೊಡನೆ ನುಗ್ಗಿಬರುವ ಮೂಗಿಗೆ ಹಗೆಯಾದ ಕೆಟ್ಟನಾತ. ಕಿವಿಗಳಿಗೆ ಅಪ್ಪಳಿಸುವ – ಗೋಳಿಡುವ ಅಬಲೆಯರ ಅಮಂಗಳ ಧ್ವನಿ. ಮೈಯನೊತ್ತುವ ನೂಕುನುಗ್ಗಲಿನ ಜನಜಂಗುಳಿ. ಕಾಲೂರಲಾಗದಂತೆ ಹಡಿಕೊಂಡಿರುವ ಮನುಷ್ಯರ ಮೂಳೆಗಳು. ಅವುಗಳನ್ನು ತುಳಿಯುತ್ತ, ಸರಿಸುತ್ತ ಹರಿಶ್ಚಂದ್ರನು ಸ್ಮಶಾನವನ್ನು ಹೊಕ್ಕನು.

ಹರಿಶ್ಚಂದ್ರನು ಹೆಣಗಳನ್ನು ಸುಡುವ ಜನಗಳ ಬಳಿಗೆ ಹೋಗಿ 'ಎಲವೊ ಸುಡದಿರು. ಸುಟ್ಟರೆ ವೀರಬಾಹುಕನಾಣೆ' ಎಂದು ಕಂಕರಿಕೋಲಿನಿಂದ ಜಡಿದನು. 'ನೆಲದ ಸುಂಕವನ್ನು, ಬಟ್ಟೆಗಳನ್ನು, ತಲೆಯಕ್ಕಿಯನ್ನು ಕೊಡಿ' ಎಂದು ಅಲ್ಲಲ್ಲಿಗೆ ಹೋಗಿ ಮಸಣ ವಾಡಗೆಯನ್ನು ಕೇಳಿ ಪಡೆದನು. ರಭಸದಲ್ಲಿ ಎಡವುತ್ತ, ಎಲುಬುಗಳನ್ನು ಮೆಟ್ಟಿ ಅಡಿಗಳಿಗೆ ಆದ ಗಾಯವನ್ನು ಲೆಕ್ಕಿಸದೆ ಸುಳಿದಾಡಿ ತನ್ನ ಕೆಲಸದಲ್ಲಿ ತೊಡಗಿದನು.

ಅವನು ಆ ಸ್ಮಶಾನದಲ್ಲಿ ಹೆಣವನ್ನು ಸಾಗಿಸುವ ವಿಮಾನಮಂಟಪದ ಮರಗಳನ್ನು, ಉರಿ ಕರಿಯಾದ ಕರಿಕೊಳ್ಳಿಗಳನ್ನು ಆರಿಸಿ ತಂದನು. ಸಿದ್ದಿಗೆಗೆ ಬಿಗಿದ ದಾರವನ್ನು ಬಿಡಿಸಿಕೊಂಡನು. ಅವುಗಳಿಂದ ಎತ್ತರವಾದ ಅಟ್ಟಣೆಯನ್ನು ಕಟ್ಟಿದನು. ಅದರ ಮೇಲೆ ಒಂದು ಗುಡಿಸಲನ್ನು ಕಟ್ಟಿದನು. ತನ್ನ ಒಡೆಯನ ಆಜ್ಞೆಯಂತೆ ಸ್ಮಶಾನವನ್ನು ಹಗಲು ಇರುಳು ಎನ್ನದೆ ಕಾಯುತ್ತಿದ್ದನು.

**ಎನ್ನ ಪತಿಗೆ ಬಂಧನ ಮೋಕ್ಷವಂ ಮಾಡಿ ಕರುಣಿಸು**

ಮಂತ್ರಿ ಸತ್ಯಕೀರ್ತಿಯು ಉಷಃಕಾಲದಲ್ಲಿ ಎದ್ದು ಗಂಗಾನದಿಯಲ್ಲಿ ಸ್ನಾನ ಮಾಡಿ ಕಾಶಿ ವಿಶ್ವನಾಥನನ್ನು ಅರ್ಚಿಸುತ್ತಿದ್ದನು. ಮಹಾ ದೈನ್ಯದಿಂದ ಕೈಮುಗಿದು 'ನನ್ನ ಒಡೆಯನಿಗೆ ಬಂಧನ ಮೋಕ್ಷವನ್ನುಂಟು ಮಾಡು, ಕರುಣಿಸು' ಎಂದು ಪ್ರಾರ್ಥಿಸುತ್ತಿದ್ದನು.

ಅಲ್ಲಿಂದ ಬಂದು ಭೂವರ ಹರಿಶ್ಚಂದ್ರನ ಮೈ ಕೈ ಕಾಲನ್ನು ಒತ್ತಿ 'ಭೂಪಾಲನೇ ಮತಿ ಗುಂದದಿರು. ಚಿಂತಿಸದಿರು. ಹಿಂದಿನದನ್ನು ನೆನೆಯದಿರು. ವಿಶ್ವನಾಥನು ಕರುಣಿಸುವನು' ಎಂದು ಹೇಳುತ್ತ ಸಂತೈಸುತ್ತಿದ್ದನು.

ಹರಿಶ್ಚಂದ್ರರಾಜನಿಗೆ ವಾರಣಾಸಿಯೇ ದೇಶ, ಕಾಶೀಪುರವೇ ಅಯೋಧ್ಯೆ, ಸ್ಮಶಾನ ಭೂಮಿಯೇ ಅರಮನೆಯಾಗಿತ್ತು. ಸುಡುಗಾಡನ್ನು ಕಾಯಲು ಕೂಡುವ ಜಗಲಿ ಕಟ್ಟೆಯೇ ಮಣಿ ಪೀಠವಾಗಿ, ಕಾಯಕದ ಫಲವೇ ಭೋಜನವಾಗಿತ್ತು. ಪರಮಧೃತಿಯೇ ಚತುರಂಗಸೇನೆಯಾಗಿ, ಸಂಬಳಿಗೋಲು ಕತ್ತಿಯಾಗಿ, ಸತ್ಯವೇ ಭಂಡಾರವಾಗಿ, ಪತಿಯಾಜ್ಞೆಯೇ ಕ್ಷತ್ರಿಯ ಧರ್ಮವಾಗಿತ್ತು.

ಹೀಗೆ ಹರಿಶ್ಚಂದ್ರನು ಒಡೆಯನ ಆಜ್ಞೆಯನ್ನು ಪಾಲಿಸುತ್ತ ನೆಲದ ಬಾಡಿಗೆ, ತಲೆಯಕ್ಕಿ, ಬಟ್ಟೆಯನ್ನು ತೆಗೆದುಕೊಂಡು ದಿನವನ್ನು ಕಳೆಯುತ್ತಿದ್ದನು. ಶಿವಧ್ಯಾನದ ಅಮೃತಪಾನವನ್ನು ಮಾಡುತ್ತ ಚಿಂತೆಯಿಂದ ದೂರವಾಗಲು ಪ್ರಯತ್ನಿಸುತ್ತಿದ್ದನು. ಶಾಂತಿ ಸಮಾಧಾನ ಧಾರಿಯಾಗಿ ಸತ್ಯವನ್ನು ಮೆರೆಯುತ್ತಿದ್ದನು.

# ಲೋಹಿತಾಶ್ವನ ಮರಣ

**ಚಂ**ದ್ರಮತಿ ಲೋಹಿತಾಶ್ವರನ್ನು ಒತ್ತೆಯಿಟ್ಟ ಮನೆಯಲ್ಲಿ ಅವರು ಕಠೋರ ಕಷ್ಟವನ್ನು ಅನುಭವಿಸುತ್ತಿದ್ದರು. ಅದು ಕಟುಕರ ನಿಲಯವಾಗಿತ್ತು. ಅದು ರಕ್ಕಸರ ಬೀಡು, ಹಾವಿನ ಹೇಳಿಗೆ (ಬಿದಿರಿನ ಬುಟ್ಟಿ), ಯಮನಗರ, ಮೃತ್ಯುವಿನ ಅಡಿಗೆಮನೆ, ಮಾರಿಯ ಕಟವಾಯಿಯಂತಿತ್ತು. ಆ ಮನೆಯ ಒಡೆಯನು ಅತಿಕೋಪಿ ಹೆಂಡತಿ ಮಹಾಮೂರ್ಖೆ, ಮಗ ಕಡು ಧೂರ್ತ, ಸೊಸೆ ಅತ್ಯಂತ ನಿಷ್ಠುರೆ. ಮನೆಯನ್ನು ನಡೆಸುವವರು ದುರ್ಜನರು. ನೆರೆಮನೆಯವರು ಮಿಥ್ಯಾವಾದಿಗಳು.

ಆ ಮನೆಯವರು ಅಡಿಗಡಿಗೆ ಕೋಪಿಸಿಕೊಳ್ಳುತ್ತ, ಸಾಯುವಂತೆ ಸದೆಬಡಿಯುತ್ತಿದ್ದರು. ಕೆಟ್ಟ ಮಾತಾಡುತ್ತ ಹಿಂಸೆ ನೀಡಿ ಜಗಳವಾಡುತ್ತ, ಬೀಳುವಂತೆ ಹೊಡೆದು, ಮೈ ಮುರಿಯುವಂತೆ ದುಡಿಸುತ್ತಿದ್ದರು. ಅಲ್ಲಿ ಆ ತಾಯಿ ಮಗ ಸತ್ತು ಹುಟ್ಟಿದಂತೆ ಹಿಂಸೆಯನ್ನು ಅನುಭವಿಸುತ್ತಿದ್ದರು.

**ಧಾರಿಣಿಯೊಳವನಿಪನ ಸತ್ಯ ಸಲಬೇಹುದೆಂಬಾರಯ್ಕೆ ವಿಡಿದು ನಡೆಯುತ್ತಿಪ್ಪ ನಾರಿ**

ಚಂದ್ರಮತಿಯು ಆ ಅರಮನೆಯಲ್ಲಿ ಪುರುಸೊತ್ತಿಲ್ಲದಂತೆ ಹಲವು ಬಾರಿ ನೀರನ್ನು ತುಂಬಿ, ಕೊಟ್ಟ ಬತ್ತವನ್ನೆಲ್ಲ ಕುಟ್ಟುತ್ತಿದ್ದಳು. ಹಾಕಿದಷ್ಟು ಅನ್ನವನ್ನುಂಡು, ಹಗಲು ಇರುಳು ಎನ್ನದೆ- ಅರಸಿಯಾಗಿದ್ದವಳು ಆಳಾಗಿ ದುಡಿಯುತ್ತಿದ್ದಳು. ಮಗ ಲೋಹಿತಾಶ್ವನು ಬೆಳಿಗ್ಗೆಯೇ ಎದ್ದು ಹೇರಡವಿಗೆ ಹೋಗುತ್ತಿದ್ದನು. ಅಲ್ಲಿ ಹುಲ್ಲು ಹುಳ್ಳಿಗಳನ್ನು ಹುಡುಕಿ ಹೊರೆ ಕಟ್ಟಿಕೊಂಡು ಜೊತೆಗಾರರೊಂದಿಗೆ ಸಂಜೆಗೆ ಬರುತ್ತಿದ್ದನು.

ಯಜಮಾನನು ನಡುಮನೆಯಲ್ಲಿ ಕಸವಿರಲು ಬೈಯುತ್ತಿದ್ದನು. ಕರೆಯುವ ಹಸುಗಳನ್ನು ಕಟ್ಟಿ, ಕರೆಯಲು ಹೋದರೆ ಅವು ಒದೆಯುತ್ತಿದ್ದವು. ಅವನ ಸೊಸೆಯು ಬೆನ್ನನ್ನು ಸರಿಯಾಗಿ ಒರಸಲಿಲ್ಲವೆಂದು ಗುದ್ದುತ್ತಿದ್ದಳು. ಅವನ ಮಗ ತನ್ನ ಕಾಲನ್ನು ತೊಳೆಯಲು ನೀರು ಕೊಡಲಿಲ್ಲವೆಂದು ಒದೆಯುತ್ತಿದನು. ನೆರೆಮನೆಯ ಚಾಡಿಕೋರರು ಕಳ್ಳಿಯೆಂದು ಆರೋಪಿಸಲು ಯಜಮಾನಿಯು ಗುರುಗುಟ್ಟಿಕೊಂಡು ಬಡಿಯುತ್ತಿದ್ದಳು.

ಆ ಎಲ್ಲ ಹಿಂಸೆಯ ಜೊತೆಗೆ ಮಗನ ಕಡುಕಷ್ಟ ಕಂಡು ಚಂದ್ರಮತಿ ತುಂಬಾ ದುಃಖಿತಳಾಗುತ್ತಿದ್ದಳು. ಹೀಗೆ ಅವಳು ಒಂದೇ ಸಮನೆ ಹಿಂಸೆಗೆ ಒಳಗಾದರೂ; ನಡುಗಿ ಬೆದರಿ ಕಂಗೆಟ್ಟು ಓಡಿಹೋಗಲಾರದೆ, ಸಾಯಲಾರದೆ, ಬದುಕಲಾರದೆ ದಿನ

ದೂಡುತ್ತಿದ್ದಳು. ಈ ಪ್ರಪಂಚದಲ್ಲಿ ರಾಜ ಹರಿಶ್ಚಂದ್ರನ ಸತ್ಯವನ್ನು ಸಲಹಬೇಕೆಂಬ ಹಾರೈಕೆಯಿಂದ ನಡೆಯುತ್ತಿದ್ದಳು. ಆ ಸ್ಥಿತಿಯಲ್ಲಿ ಅವಳಿಗೆ ಪುತ್ರನ ಸಾವು ಸಿಡಿಲಂತೆ ಎರಗಿ ಬಂದಿತು.

ಲೋಹಿತಾಶ್ವನು ಎಂದಿನಂತೆ ಅದೊಂದು ದಿನ ಬೆಳಿಗ್ಗೆಯೇ ಎದ್ದು ಹುಲ್ಲು, ಹುಳ್ಳಿ ತರಲು ಅರಣ್ಯಕ್ಕೆ ನಡೆದನು. ಅಲ್ಲಿ ಹೋಗಿ ಹಲವು ರೀತಿಯ ಕಟ್ಟಿಗೆಯನ್ನು ಆಯ್ದು ಒಟ್ಟಿ ಹೊರೆಗಟ್ಟಿ ಹೊತ್ತುಕೊಂಡು ತನ್ನ ಓರಗೆಯ ಮಕ್ಕಳೊಡನೆ ಬರುತ್ತಿದ್ದನು. ಮಧ್ಯಾಹ್ನದ ಉರಿಬಿಸಿಲಿನಲ್ಲಿ ಎದೆ ಆರಿ, ಶಕ್ತಿ ಗುಂದಿ, ತಲೆಸುತ್ತಿ, ನಡೆಗೆಟ್ಟು ಬಾಯಾರಿದನು. ಹಣೆಯಿಂದ ಬೆವರು ಸುರಿಯುತ್ತಿರಲು, ನೆತ್ತಿಯಲ್ಲಿ ಹೊತ್ತ ಹೊರೆಯ ಭಾರಕ್ಕೆ ತೇಕುತ್ತ ನಡೆಯುತ್ತಿದ್ದನು.

ಆಗ ಕೆಲವು ಮೆಳೆಗಳ ಒತ್ತಿನಲ್ಲಿದ್ದ ಹುತ್ತಿನಲ್ಲಿ, ಚೆನ್ನಾಗಿ ಬೆಳೆದು ಕೋಮಲತೆಯಿಂದ ನಳನಳಿಸುವ ಹುಲ್ಲನ್ನು ಕಂಡನು. ಅದೆಲ್ಲವನ್ನು ಗಳಗಳನೆ ಕೊಯ್ದುಕೊಂಡು ಹೋಗಿ ನನ್ನ ಒಡೆಯನಿಗೆ ಕೊಟ್ಟರೆ; ಅವನು ಅಂದಾದರೂ ತನ್ನ ಮೇಲೆ ಕೋಪಗೊಳ್ಳುವುದಿಲ್ಲ ಎಂಬ ಆಸೆಗೆ ಒಳಗಾದನು. ಹೊರೆಯನ್ನು ಇಳಿಸಿ ಕುಡುಗೋಲು ಹಿಡಿದು- ಪಶ್ಚಿಮ ಪರ್ವತವನ್ನು ಸೇರುತ್ತಿರುವ ಸೂರ್ಯನಂತೆ ಅದರ ಹತ್ತಿರಕ್ಕೆ ಹೋದನು.

**ಕಯ್ಯುಹದರನೊಡೆಗಚ್ಚಿ ಜಡಿಯುತ್ತ ಭೋಂಕನೆ ಬಂದ ರೌದ್ರಸರ್ಪ**

ಪೊದೆಯನ್ನು ಕಡಿದು ಹುತ್ತವನ್ನು ಹತ್ತಿ, ಅದರ ಸುತ್ತ ಬೆಳೆದ ಎಳೆಹುಲ್ಲಿನ ಹೊದರನ್ನು ಹಿಡಿದು ಬಿಡದೆ ಸೆಳೆದನು. ಆಗ ತಕ್ಷಣ ಅವನ ಕೈ ಮಣಿಕಟ್ಟನ್ನು ಕಚ್ಚಿ, ಭೋಂಕನೆ ರುದ್ರ ಭಯಂಕರ ಸರ್ಪ ಕಂಡುಬಂದಿತು. ಅದನ್ನು ಕಂಡು ಹವ್ವನೆ ಹಾರಿದನು. 'ಹಾ' ಎಂದು ಕೈಕಾಲು ಬಡಿಯುತ್ತ ತಲೆಕೆಳಗಾಗಿಬಿದ್ದನು! ಅಕಟಕಟ! ರಾಹುಗ್ರಸ್ಥವಾದ ತರುಣ ಚಂದ್ರಬಿಂಬವು ನೆಲಕ್ಕೆ ಉರುಳುವಂತೆ ಉರುಳಿಬಿದ್ದನು!

ಹಾವನ್ನು ಕಂಡ ಅವನ ಜೊತೆಗಿದ್ದವರು ಹೆದರಿ ಅವನನ್ನು ಬಿಟ್ಟು ಊರಿಗೆ ಓಡಿ ಹೋದರು! ಲೋಹಿತಾಶ್ವನು ತಾಯಿಯನ್ನು ಕರೆದು ಗೋಳಾಡಿದನು. ತಂದೆಯನ್ನು ನೆನೆಯುತ್ತ ದಿಕ್ಕು ದಿಕ್ಕುಗಳನ್ನು ಬಾಯಿಬಿಟ್ಟು ನೋಡುತ್ತ ನೆತ್ತಿಗೇರಿದ ವಿಷದಿಂದ ಮಡಿದನು! ಆ ಹೊತ್ತು ತನ್ನ ಕುಲದಕುಡಿ ಮುರುಟಿ ಹೋಯಿತು ಎಂಬ ದುಃಖದಿಂದ ಬಿದ್ದನೋ ಎಂಬಂತೆ- ರವಿ ಪಶ್ಚಿಮದ ಕಡಲಿಗೆ ಬಿದ್ದನು!

ಮಗನು ಪ್ರತಿದಿನ ಬರುವ ಹೊತ್ತಿಗೆ ಬಾರದಿರಲು ಮನನೊಂದ ಚಂದ್ರಮತಿ ಇಂದೇಕೆ ತಡಮಾಡಿದನೆಂದು ಉದ್ವಿಗ್ನೆಯಾದಳು. ಕಂದನನ್ನು ನೆನೆದು ನಿಟ್ಟುಸಿರುಬಿಡುತ್ತ, ಮರುಗುತ್ತ ಹೊಟ್ಟೆಯನ್ನು ಹಿಸುಕಿಕೊಂಡಳು. ಕೊನೆ ಬೆರಳನ್ನು ಮುರಿದುಕೊಳ್ಳುತ್ತ ಆತಂಕಕ್ಕೊಳಾದಳು. ಹೊರಗಡೆ ಶಬ್ದವಾದರೆ ಅದನ್ನು ಆಲಿಸಲು ಓಡಿ ಹೋಗುತ್ತ; ಮತ್ತೆ ಮನೆಯೊಡತಿಗೆ ಅಂಜಿ ಕೆಲಸವನ್ನು ಮಾಡುತ್ತ ಇದ್ದಳು.

ಅವಳ ಕಳವಳಕ್ಕೆ ಅವರೇಕೆ ಗಮನ ಕೊಡುವರು? ಅವಳು ಮಗನು ಬಂದನೋ, ಏನೋ ಎಂದು ಭಾವಿಸಿ ಹೊರಹೋಗಿ ನೋಡಿದರೆ, ಅವರು ಏನಾದರು ಹೇಳುವರು. ಅಳುತ್ತಿರಲು ಅಮಂಗಳದ ಹೆಂಗಸೆಂದು ಜರೆಯುವರು. ಒಳಗೊಳಗೆ ಮಗನ ಗುಣವನ್ನು ಪ್ರಲಾಪಿಸುತ್ತಿರಲು ಬೈದಳು ಎನ್ನುವರು. ನಿಂತು ಬೆರಗಾಗಿ ಮರೆತಂತಿರಲು ಕೆಲಸಗಳ್ಳಿ ಎನ್ನುವರು. ಒಮ್ಮೊಮ್ಮೆ ನಿಟ್ಟುಸಿರು ಬಿಡಲು, ಆಸಕ್ತಿ ಇಲ್ಲದ ಉದಾಸೀನಳು ಎಂದು ಜರೆದು ಬಡಿಯುವರು.

**ಸತಿಯಳಲು ಸೀಗೆಯೊಳಗಣ ಬಾಳೆಗೆಣೆಯಾದುದು**

ಚಂದ್ರಮತಿಯ ಸಂಕಟವು–ಒಳಹೊಕ್ಕ ಬಾಣದಂತೆ; ಹೊರಗೆ ಕಾಣಿಸದಂತೆ ಒಳಗೊಳಗೆ ಕಾಯುವ ಕುಂಬಾರನ ಆವಗೆಯ ಬೆಂಕಿಯಂತೆ; ಹಗೆಗಳೊಳಗಿನ ಮುಳಿಸಿನಂತೆ ಇತ್ತು. ಮನೆಯವರ ಮುಖಕ್ಕೆ ಹೆದರಿ ಒಡೆವ ಎದೆ, ಬಿಕ್ಕುವ ಅಳ್ಳೆ, ಕಣ್ಣೀರ ಒರತೆ, ಉಬ್ಬಿ ಬಿಗಿದ ಗಂಟಲಿನ ಸೆರೆ, ಮುಕ್ಕುಳಿಸುವ ದುಃಖದಲ್ಲಿ ಅವಳಿದ್ದರೀತಿಯು–ಸೀಗೆ ಮೆಳೆಯೊಳಗಿರುವ ಬಾಳೆಗಿಡದಂತಾಗಿತ್ತು.

ಸಮಯಕ್ಕೆ ಸರಿಯಾಗಿ ಮಗ ಬಾರದಿರಲು ಆ ತಾಯಿಯು; ತನ್ನ ಮಗ ಉರಿವ ಬಿಸಿಲಿನಲ್ಲಿ ಹಸಿದು ಬಳಲಿ ಶಕ್ತಿಗುಂದಿ ಬಿದ್ದಿರುವನೋ, ಹುಲ್ಲನ್ನು ಹೊರೆಕಟ್ಟುವಾಗ ಹುಲ್ಲಿನ ಆಸೆಗೆ ಬಂದ ಹಸುಗಳು ತಿವಿದು ಬಿದ್ದಿರುವನೋ ಎಂದು ಯೋಚಿಸುವಳು. ಹುಲ್ಲುಹುಳ್ಳಿ ದೊರಕದಿರಲು ಮನೆಗೆ ಬರಲು ಹೆದರಿ ಹೊರಗಡೆ ಆಡುತ್ತಿರುವನೋ ಎಂದು ಓಡಿಹೋಗಿ ಬೀದಿಯಲ್ಲಿ ನೋಡಿ ಅಲ್ಲಿ ಕಾಣದೆ ಮರುಗುವಳು. ಹೀಗೆ ಹಲವು ಯೋಚನೆಗೊಳಗಾಗಿ ದುಃಖದಿಂದ ತನ್ನ ಮನದೊಳಗೆ ಸತ್ತುಹುಟ್ಟುತ್ತಿದ್ದಳು.

ಮಗನು ಕಾಡಿನಲ್ಲಿ ದಾರಿ ತಪ್ಪಿದನೋ, ಹುಲಿ ಹಿಡಿಯಿತೊ, ಕಳ್ಳರೊಯ್ದರೋ, ಭೂತಗಳು ಹಿಡಿದವೊ ಎಂದು ಭಯಗೊಂಡಳು. ನೀರಿನೊಳಗೆ ಮುಳಗಿದನೊ ಮರದ ಕೊಂಬೆ ಏರಿ ಬಿದ್ದನೊ, ಹಾವು ಕಚ್ಚಿತೊ, ತುಂಬಾ ಹಸಿದು ನಡೆಯಲಾರದೆ ನಿಂತುಬಿಟ್ಟನೊ ಎಂದು ಹಲವು ರೀತಿಯಲ್ಲಿ ಭೀತಿಗೊಳಗಾದಳು. ಹೊತ್ತಿ ಉರಿದ ದುಃಖದ ಕಪ್ಪು ಹೊಗೆಯಂತೆ ಕವಿದ ಕತ್ತಲೆಯೊಳಗೆ ನಿಂತಿದ್ದಳು!

ಆತಂಕಕ್ಕೆ ಒಳಗಾದ ಚಂದ್ರಮತಿಯು ಉಟ್ಟ ಸೀರೆಯನ್ನು ಹೊಟ್ಟೆಯ ಮೇಲೆ ಎಳೆದುಕೊಂಡು, ತಲೆಗೂದಲನ್ನು ಅಡಗಡಿಗೆ ತುರಿಸಿಕೊಳ್ಳುತ್ತ, ನಟ್ಟ ದೃಷ್ಟಿಯಲ್ಲಿ ಮಗನ ಬರುವನ್ನು ನೋಡುತ್ತಿದ್ದಳು. ಕೆನ್ನೆಗೆ ಕೈಯಿಟ್ಟು ಚಿಂತಿಸುತ್ತ, ಕೆಟ್ಟೆನಲ್ಲ ಎಂದು ಗೋಳಾಡಿದಳು. ಮಗ ಬರುವ ದಾರಿ ನೋಡಲು ಹೋದರೆ ಒಡತಿಯು ಗದರಿಸುವಳು ಎಂದು ನಿಟ್ಟುಸಿರುಬಿಟ್ಟಳು.

**ನಿನ್ನ ಕಂದನೊಂದುಗ್ರಫಣಿ ತಿಂದು ಜೀವಂಗಳೆದನು**

ಚಂದ್ರಮತಿಯು ಯಾರಾದರೂ ಬಂದರೆ, ನಿಂತರೆ, ಗಾಳಿ ಗಿರಿಕೆಂದರೆ 'ಲೋಹಿತಾಶ್ವ' ಎಂದು ಕರೆಯುತ್ತ ಬೀದಿಗರುವಿನಂತೆ ದಿಕ್ಕು ತೋಚದಂತಾದಳು! ಆಗ ಅವನ ಜತೆಗೆ ಹೋಗಿದ್ದ ಬಾಲಕನು ಬಂದು,

'ನಿನ್ನ ಮಗನನ್ನು ಉಗ್ರಸರ್ಪವೊಂದು ಕಚ್ಚಿತ್ತು! ಅವನು ಸತ್ತುಹೋದ!' ಎಂದು ಹೇಳಿದನು.

ತಕ್ಷಣ ಗಾಬರಿಯಿಂದ ಆ ತಾಯಿಯು ಒಂದೇ ಸಮನೆ,

'ಏಕೆ ಕಚ್ಚಿತು? ಯಾವ ಕಡೆ? ನನ್ನ ಮಗ ಸತ್ತನೆ? ಎಲ್ಲಿದೆ ಆ ಸ್ಥಳ? ಎಷ್ಟು ದೂರ?' ಎಂದು ಪ್ರಶ್ನಿಸಲು ಅವನು ಈ ದಿಕ್ಕಿನಲ್ಲಿ, ಇಂತಹ ಸ್ಥಳ, ಈಗಲೇ ಹೋಗು. ಇಲ್ಲದಿದ್ದರೆ ಖಗಮೃಗಗಳು ಎಳೆದಾವು ಎಂದು ಹೇಳಿದನು.

# ಚಂದ್ರಮತಿಯ ಪ್ರಲಾಪ

ಮಗ ಸತ್ತಿರುವನೆಂದರೂ, ದಾಸಿಯಾದ ಅವಳು ತಕ್ಷಣ ಹೋಗಲಾರಳು! ರಾಣಿಯಾಗಿದ್ದವಳಿಗೆ ಸತ್ತ ಮಗನನ್ನು ಹೋಗಿ ನೋಡಲು ಸ್ವಾಂತತ್ರ್ಯವಿಲ್ಲ! ಒತ್ತಿ ನುಗ್ಗಿಬರುವ ದುಃಖಾಗ್ನಿಯಲ್ಲಿ ಬೆಂದು ಓಡಿಬಂದು ಒಡೆಯನ ಪಾದಗಳ ಮೇಲೆ ಬಿದ್ದು ಹೇಳಿದಳು,

'ಪ್ರಭುವೇ, ಕಾಡಿನಲ್ಲಿ ನನ್ನ ಮಗ ಸರ್ಪಕಡಿದು ಮಡಿದಿರುವನು.'

'ಒಳ್ಳೆಯದಾಯಿತು! ಸತ್ತರೆ ಸತ್ತನು!' ಎಂದು ನಿಷ್ಕರುಣೆಯಿಂದ ಅತಿ ಕಠೋರವಾಗಿ ಒಡೆಯ ನುಡಿಯಲು ಅಸಹಾಯಕಳಾದ ಚಂದ್ರಮತಿಯು ಕೈಜೋಡಿಸಿ ಕೇಳಿಕೊಂಡಳು.

'ತಂದೆಯೇ, ಆಳುಗಳನ್ನು ಕಳುಹಿಸಿ ಹುಡುಕಿಸು.'

'ನಡುರಾತ್ರಿಯಲ್ಲಿ ಆಳುಗಳೆಲ್ಲಿರುವರು? ನಿದ್ದೆ ಮಾಡಬೇಕು. ಏಳು ಕಾಡಬೇಡ.'

'ನನ್ನ ಅಪ್ಪ, ನರಿಗಳು ಎಳೆಯುವ ಮೊದಲು ದಹಿಸಬೇಡವೆ? ಕರುಣಿಸಿ'

**ದುರ್ಮರಣವಟ್ಟ ಶೂದ್ರನನು ಸಂಸ್ಕರಿಸುವವರಾವಲ್ಲ**

'ದುರ್ಮರಣ ಹೊಂದಿದ ಶೂದ್ರನನ್ನು ನಾವು ಸಂಸ್ಕರಿಸುವುದಿಲ್ಲ' ಎಂದ ಒಡೆಯನ ನುಡಿ ಕೇಳಿ ದಿಕ್ಕು ತೋಚದಂತಾದ ಚಂದ್ರಮತಿಯು, ಅವನ ಅನುಮತಿಗಾಗಿ ಹೀಗೆ ಬೇಡಿಕೊಂಡಳು.

'ನಾನಾದರೂ ಹೋಗಿ ಮಗನನ್ನು ಹುಡುಕಿ, ಅಗ್ನಿಗೆ ಅರ್ಪಿಸಿ ಬರಲೆ?'

'ಆಯಿತಾಯಿತು. ಕೆಲಸ ಬಿಟ್ಹೋಡಬೇಡ. ಎಲ್ಲ ಕೆಲಸ ಮುಗಿಸಿ ಹೋಗು' ಎಂದು ಒಡೆಯ ಅನುಮತಿಸಲು ಬೇಗಬೇಗನೆ ಎಲ್ಲ ಕೆಲಸವನ್ನು ಮಾಡಿ ಮಗನನ್ನು ಹುಡುಕುತ್ತ ಹೊರಟಳು.

ದಟ್ಟೈಸಿ ಮಡಿಲಿರಿವ ಕತ್ತಲೆಯ ಮಧ್ಯ ರಾತ್ರಿಯಲ್ಲಿ ಒಬ್ಬಳೇ ಮಗನನ್ನು ಹುಡುಕುತ್ತ ಹೋದಳು! ಮುಳ್ಳುಗಳನ್ನು ತುಳಿದು, ಕಲ್ಲುಗಳನ್ನು ಎಡವುತ್ತ ಕಾರ್ಗತ್ತಲೆಯಲ್ಲಿ ಕಾಣದ ಮರಕ್ಕೆ ತಲೆ ಬಡಿದುಕೊಂಡಳು! ಹಳ್ಳದಲ್ಲಿಳಿದು, ದಿಣ್ಣೆಗಳನ್ನು ಏರಿ; ಬಿಟ್ಟ ತಲೆ, ಬಿಚ್ಚಿದುಡುಗೆಯನ್ನು ಲೆಕ್ಕಿಸದೆ ಓಡೋಡಿ ಹೋಗಿ ಹುಡುಕಿದಳು. ಜೊತೆಗಾರ ಹುಡುಗ ಹೇಳಿದ ಸಣ್ಣದಾರಿಯಲ್ಲಿ ಬೆಳೆದ ದೊಡ್ಡಮರದ ಬಳಿ ಬಂದಳು. ಅದಕ್ಕೆ ಒರಗಿಸಿದ್ದ ಹುಳ್ಳಿ ಹೊರೆಯನ್ನು ಕಂಡಳು.

ಈ ಸ್ಥಳದಲ್ಲಿ ಕಂದನಿರಬೇಕೆಂದು 'ಮಗನೆ, ಮಗನೇ ಹರಿಶ್ಚಂದ್ರರಾಯನ ಕುಮಾರ ಹೇಳು ಯಾವ ಜಾಗದಲ್ಲಿ, ನೀನೆಲ್ಲಿರುವೆ? ಓ ಎನ್ನಬಾರದೇ ಕಂದ? ಈ ಕಡೆ ಬಾ ಎಂದು ಕರೆಯಬಾರದೆ ತಂದೆ! ಏಕೆ ಮಾತಾಡುತ್ತಿಲ್ಲ ಮಗನೆ?' ಎಂದು ಮಗನನ್ನು ಕೂಗಿ ಕರೆದಳು.

ಆತುರದಲ್ಲಿ ತಡವರಿಸಿ ಬಿದ್ದಳು. ಅತಿ ದುಃಖದ ಉರಿಯಲ್ಲಿ ಕಂಠದ ಸೆರೆಬಿಗಿಯುವಂತೆ ಒರಲುತ್ತ ಕರೆದಳು. ತವಕಗೊಂಡು ಅಳುತ್ತ, ಬಳಲುತ್ತ ಹರಹರ ಮಹಾದೇವ! ಮಗನನ್ನು ಹಾವು ಕಡಿದ ಸ್ಥಳಕ್ಕೆ ಬಂದಳು!

**ಜೀವವಿಕ್ಕೆಂಬಾಸೆಯಿಂ ತೇಂಕುದಾಣಂಗಳಂ ಬಗೆದಳು**

ಹುತ್ತದ ಪಕ್ಕದಲ್ಲಿ ವಿಷದಹೊಗೆ ಹಬ್ಬಿ ಹಸುರಾದಮೈ, ನೊರೆ ಒಸರುವ ಗಲ್ಲ, ಕಂದಿದ ಉಗುರುಗಳು, ಹೆದರಿಸುವ ಕಣ್ಣುಗಳು, ಹುಲ್ಲು ಹಿಡಿದು ಚೆಲ್ಲಿದ ಕೈಯ ಮಗನನ್ನು ನೋಡಿ ಕುಸಿದು ಹೋದಳು.

ಅಯ್ಯಯ್ಯೊ! ಮುರಿದ ಕೊರಳು, ಪಕ್ಕಕ್ಕೆ ಹೊರಳಿ ಧೂಳಾದ ಬಟ್ಟ ಬಾಯಿಯ ಮಗನನ್ನು ಕಂಡಳು! ಶಿವ ಶಿವ!! ಮಗನ ಮೇಲೆ ಬಿದ್ದು ಹೊರಳಾಡಿದಳು! ಬಿಗಿದಪ್ಪಿ ಕೊಂಡು ಒರಲಿದಳು. ಹೊಟ್ಟೆಯನ್ನು ಹೊಸೆಹೊಸೆದುಕೊಂಡು ಮೊರೆಯಿಟ್ಟಳು. ಮುದ್ದು ಗೈಯ್ಯುತ್ತ ಸುತ್ತ ಹೊರಳಾಡಿ ಕರೆಕರೆದು ಲಲ್ಲೆಗರೆದಳು. ಅತ್ತುಅತ್ತು ಬಲವಳಿದು ಬೆಂಡಾದಳು. ತನ್ನ ಮಗನಲ್ಲಿ ಇನ್ನೂ ಜೀವವಿದೆಯೆಂಬ ಆಸೆಯಿಂದ ನಾಡಿಮಿಡಿಯುವ ಸ್ಥಳಗಳಾದ – ತೇಂಕುದಾಣಗಳನ್ನು ಪರಿಶೀಲಿಸಿದಳು.

ಚಂದ್ರಮತಿಯು ಮಗನನ್ನು ಮುಟ್ಟುತ್ತ ಉಸಿರಾಡುವ ಜಾಗದಲ್ಲಿ ಜೀವದ ಮಿಡುಕಿದೆಯೆ ಎಂದು ನೋಡಿದಳು. ಮೂಗಿನಲ್ಲಿ ಉಸಿರನ್ನು, ಅಳ್ಳೆಯಲ್ಲಿ ಹೊಯ್ಲನ್ನು. ಉಗುರಿನಲ್ಲಿ ಕೆಂಬಣ್ಣವನ್ನು, ಎದೆಯಲ್ಲಿ ಬಡಿತವನ್ನು ಹುಡುಕಿದಳು. ಕೈಯಲ್ಲಿ ಮಿಡುಕಾಟವನ್ನು, ಅಂಗಗಳಲ್ಲಿ ಸಂವೇದನೆಯನ್ನು, ಕಣ್ಣುಗಳಲ್ಲಿ ಹೊಳಪನ್ನು ಅರಸಿದಳು. ಹಣೆಯಲ್ಲಿ ಬೆವರನ್ನು, ಲಲಿತ ಕಂಠದಲ್ಲಿ ಮಿಡುಕನ್ನು, ಪಾದಗಳಲ್ಲಿ ಬಿಸಿಯನ್ನು, ಬೆರಳುಗಳಲ್ಲಿ ನಟಿಕೆಯನ್ನು ಉಂಗುಷ್ಠದಲ್ಲಿ ರಕ್ತವನ್ನು, ನಾಲಗೆಯಲ್ಲಿ ಪಸಿಯನ್ನು, ರೋಮದಲ್ಲಿ ಬಲವನ್ನು ಕಾಣದೆ ದುಃಖಿಸಿದಳು.

'ಅಯ್ಯೊ.ಮಗನೆ ಹೆತ್ತೊಡಲು ಹುಡಿಹುಡಿಯಾಗಿ ಹೋಯಿತು! ಸಿರಿ ಹೋದ ಮರುಕವನ್ನು, ನೆಲೆಗೆಟ್ಟ ಚಿಂತೆಯನ್ನು, ಪರದೇಶ ಹೊಕ್ಕ ನಾಚಿಕೆಯನ್ನು ಅನ್ಯರ ಮನೆಯ ತೊತ್ತಾದ ಅಪಮಾನವನ್ನು, ನಿನ್ನ ತಂದೆಯ ಅಜ್ಞಾತವಾಸವನ್ನು ನಿನ್ನ ನೋಡಿ ಮರೆಯುತ್ತಿದ್ದೆ. ನನ್ನ ಕುತ್ತಿಗೆಯನ್ನು ಕೊಯ್ದು ಬಿಟ್ಟೆಯಲ್ಲೋ, ಇನ್ನು ಯಾರನ್ನು ನೋಡಿ ಈ ಕಠೋರ ಬದುಕನ್ನು ಮರೆಯಲಿ' ಎಂದು ಗೋಳಿಟ್ಟಳು.

'ಮಗನೇ, ನಿನ್ನ ತಂದೆ ಹರಿಶ್ಚಂದ್ರ ಭೂಪತಿಯು ಅನ್ಯರ ಆಳಾಗಿ ದುಡಿದು, ಧನವನ್ನು ಸಂಪಾದಿಸಿ ನಮ್ಮನ್ನು ಬಿಡಿಸುವ ವಾರ್ತೆಯನ್ನು ಮೋಹದಿಂದ ತರುವನು. ಹಸಿವು ನಿದ್ದೆ ತೊರೆದು ಓಡೋಡಿ ಬಂದು 'ಮಗನನ್ನು ಕರೆ' ಎಂದಾಗ ನಾನು ಏನೆಂದು ಉತ್ತರ ಹೇಳುವುದು? ಯಾವುದನ್ನು ತೋರಿಸಿ ಅವನ ಬೇಗುದಿಯನ್ನು ಮರೆಸುವುದು? ಉಗ್ರಸರ್ಪಕ್ಕೆ ಆಹುತಿಯಾದ ಎಂದು ಹೇಳಲೆ?' ಎಂದು ನೊಂದು ಕೂಗಿಟ್ಟಳು.

'ಓ ಮಗನೇ, ಅರಮನೆಯಲ್ಲಿ ಆನೆಯ ದಂತದ ಕಾಲುಗಳ ಮಂಚದ ಮೇಲೆ ಹಂಸದ ತುಪ್ಪಳದಿಂದ ತಯಾರಿಸಿದ ಹಾಸಿಗೆಯ ಮೇಲೆ ಮಣಿ ಬೆಳಕಿನಲ್ಲಿ, ಜೋಗುಳ ಹಾಡುವ ತರುಣಿಯರ ನಡುವೆ ಮಲಗುವ ರಾಜಕುಮಾರ ನೀನು. ಅಂತಹ ಸುಕುಮಾರ ಯಾರೂ ವಿಚಾರಿಸದ ಕಾಡಿನಲ್ಲಿ, ಕತ್ತಲೆಯಲ್ಲಿ ಕಲ್ಲು ನೆಲದಲ್ಲಿ ಮಲಗಿರುವುದು ಉಚಿತವೆ?' ಎಂದು ಹೇಳುತ್ತ ಸಂಕಟಪಟ್ಟಳು.

**ಅವನಿಯೊಳು ಹೊರಳುತ್ತತ್ತಳು ಆತನ ಮಾತೆ ಸರಳುರ್ಚಿದ ಮೃಗದೊಲು.**

'ಮಗನೇ, ಹಾವು ಕಚ್ಚಲು 'ಹಾ' ಎಂದು ಕಿರುಚಿ ಕೊಂಡೆಯಾ? ಸಾಯುವಾಗ 'ಅವ್ವಾ' ಎಂದು ಅತ್ತೆಯಾ? 'ಅಪ್ಪಾ' ಎಂದು ಅರಚಿ ಅಳುತ್ತ ಮಡಿದೆಯಾ? ಹಾಳು ಮಂಟಪವೇ ನನಗೆ ಗತಿಯೆಂದು ಹೇಳಿ, ಹೊರಟುಬಿಟ್ಟೆಯಾ?' ಎಂದು ಆತನತಾಯಿ ಬಾಣಹೊಕ್ಕಿದ ಮೃಗದಂತೆ ನೆಲದಲ್ಲಿ ಬಿದ್ದು ಹೊರಳಾಡಿ ಅತ್ತಳು.

'ಶತ್ರುವೆಂಬ ಆನೆಗೆ ಸಿಂಹ ಪ್ರಾಯನೇ, ಮಣಿ ಮಕುಟ ಧರಿಸುವ ಶಿರದಲ್ಲಿ ಒಣಹುಲ್ಲು ಹೊತ್ತೆಯಲ್ಲಾ! ಕತ್ತಿ ಹಿಡಿದು ಹೋರಾಡುವ ಭುಜದಲ್ಲಿ ಕೊಡಲಿಯನ್ನು ಹೊತ್ತೆಯಲ್ಲಾ! ವಿಧಿ ಮುಳಿದು ಚಂದನ ವಸ್ತ್ರವನ್ನು ತೆಗೆಸಿ ಒಂದೇ ಅರಿವೆಯನ್ನು ಉಡಿಸಿತು. ಮೃಷ್ಟಾನ್ನವನ್ನು ಉಣ್ಣುವ ನೀನು ದನಕಾಯುವವರ ಜೊತೆ ಅಂಬಲಿಯನ್ನು ಉಣ್ಣುವಂತೆ ಮಾಡಿತು. ನಾನು ಸೈರಿಸಲಾರದೆ ಬೆದಬೆದ ಬೆಂದುಹೋದೆ. ಆದರೂ ಧೈರ್ಯದಿಂದ ಪತಿಯಾಜ್ಞೆಗಾಗಿ ಎಂಥ ಅವಸ್ಥೆಯನ್ನೂ ಎದುರಿಸಿದೆ. ವಿಧಿ ಬಂದು ನಿನ್ನನ್ನು ಕೊಂಡೊಯ್ಯಿತಲ್ಲಾ! ಶಿವನೆ ಹೇಗೆ ಸೈರಿಸಲಿ! ನನಗೆ ಸಾವನ್ನು ಕರುಣಿಸು!, ಎಂದು ಹೇಳುತ್ತ ಮಗನ ಹಣೆಗೆ ಹಣೆಸೇರಿಸಿ ಮುದ್ದಾಡಿ ಅತ್ತಳು.

'ಸೂರ್ಯಕುಲದ ಕುಡಿಯೇ, ದೇಶವನ್ನು ಆಳುವವರು ಈ ರೀತಿ ಮಲಗುವರೆ? ಕುದುರೆ ಹೂಡಿದ ರಥದಲ್ಲಿ ಹೊರಟು ದೇವಾಸುರರೊಡನೆ ಹೋರಾಡಿ ವೀರರ ತಲೆಗಳನ್ನು ಚೆಂಡಾಡು. ಭೂತ ಸಂಕುಳ ತಣಿದು ಕುಣಿದಾಡುವಂತೆ ಮಾಡು. ಸೂರ್ಯವಂಶದ ಕೀರ್ತಿಸಾರು' ಎಂದು ಹೊಗಳುತ್ತ ಮತ್ತೆ ವಾಸ್ತವಕ್ಕೆ ಹೊರಳಿ,

'ಕಂದ ನಿನ್ನನ್ನು ಅಗಲಿ ನಾನಿರಲಾರೆ. ನನಗಿನ್ನಾರುಗತಿ. ಪಂಪಾಪತಿಯೆ, ಕಾಶಿಪತಿಯೆ ಈ ಪಾಪಿಗೆ ಕರುಣೆ ತೋರು' ಎಂದು ಶಿವನನ್ನು ಪ್ರಾರ್ಥಿಸಿದಳು.

ನನ್ನ ಒಡೆಯನು ಹುಡುಕುತ್ತ ಬಂದು ನನ್ನನ್ನು ಕರೆದುಕೊಂಡು ಹೋದರೆ ಬಳಿಕ ಸುಡುವುದಾದರೂ ಹೇಗೆ ಎಂದು ತನ್ನಲ್ಲಿ ತಾನೆ ವಿಚಾರ ಮಾಡಿಕೊಂಡಳು. ಕರ್ತವ್ಯ ಪ್ರಜ್ಞೆಯಿಂದ ತಕ್ಷಣ ಪುತ್ರನನ್ನು ಎತ್ತಿಕೊಂಡು ಸ್ಮಶಾನ ಎಲ್ಲಿದೆಯೆಂದು ಹುಡುಕಾಡಿದಳು. ಶವಗಳನ್ನು ಸುಡುವ ಉರಿಯ ಬೆಳಕನ್ನು ಕಂಡಳು. ಸತ್ಯ ಹರಿಶ್ಚಂದ್ರನು ಕಾವಲಿರುವ ಸ್ಮಶಾನದ ಕಡೆ ನಡೆದಳು.

**ಭೂತ ಭೇತಾಳರಾಡಿದರು ಕೌಶಿಕ ಪ್ರೇರಣೆಯೊಳು**

ಆಗ ಆ ಮಾನಿನಿಯನ್ನು ಹೆದರಿಸಬೇಕೆಂದು ಕೌಶಿಕನ ಪ್ರೇರಣೆಯಿಂದ ಭೂತ ಭೇತಾಳಗಳು ಎದುರು ಬಂದವು. ಅವು ಕೆದರಿದ ತಲೆ, ಬಿಟ್ಟ ಬಾಯಿಯ ದಪ್ಪ ಹೊಟ್ಟೆಯಲ್ಲಿ ಬೆತ್ತಲಾಗಿದ್ದವು! ಕಂಗೆಣ್ಣು ರಾಚುತ್ತ, ಕೋರೆ ದಾಡೆಗಳೊಡನೆ ಬತ್ತಿಹೋದ ಶರೀರದಲ್ಲಿ ಮುದುಡಿದ ತೊಗಲು, ಸುಕ್ಕಿದ ಮೊಲೆ ಹೊಂದಿದ್ದು ಹೆಗಲಮೇಲೆ ಹೆಣ ಹೊತ್ತಿದ್ದವು! ಕೈಯಲ್ಲಿ ಕಪಾಲ ಹಿಡಿದು ವಿಕೃತ ವೇಷದಲ್ಲಿ ಅವಳನ್ನು ಸುತ್ತಿ ಮುತ್ತಿ ಝುಂಕಿಸಿದವು!

ಪುತ್ರಶೋಕ ತಪ್ತೆಯಾದ ಚಂದ್ರಮತಿಯು ಅವುಗಳನ್ನು ಲೆಕ್ಕಿಸದೆ ನಡೆದು ಬಂದು ಸುಡುಗಾಡಿನಲ್ಲಿ ಮಗನನ್ನು ಇಳಿಸಿದಳು.

**ಬೆಳೆದಲ್ಲಿ ಬೆಳೆ, ಹುಟ್ಟಿದಲ್ಲಿ ಹುಟ್ಟು**

ಗಳಗಳನೆ ಈ ಮೊದಲು ಅರ್ಧಂಬರ್ಧ ಬೆಂದು ಉಳಿದಿದ್ದ ಕರಿಗೊಳ್ಳಿಗಳನ್ನು ಆರಿಸಿ ತಂದು ಒಂದು ಕಡೆ ಒಟ್ಟಿದಳು. ಅದರ ಮೇಲೆ ಮಂಗಳಮಯ ಕುಮಾರನನ್ನು ಮಲಗಿಸಿ ದಹನ ಕ್ರಿಯೆಗೆ ಅಣಿಮಾಡಿದಳು. ಹತ್ತಿರದಲ್ಲಿ ಉರಿಯುತ್ತಿರುವ ಕೊಳ್ಳಿಯನ್ನು ತಂದು ಮಗನನ್ನು ನೋಡುತ್ತ 'ಬೆಳೆದಲ್ಲಿ ಬೆಳೆ, ಹುಟ್ಟಿದಲ್ಲಿ ಹುಟ್ಟು' ಎಂದು ಹೇಳಿದಳು.

ದಹನಕ್ಕಾಗಿ ಕಿಚ್ಚಿಡಲಾಗದೆ ಬಳಲಿ, ಅತಿ ದುಃಖದಿಂದ ಎದೆ ಬಡಿದುಕೊಂಡು ಗೋಳಾಡಿದಳು.

ಭೂಪಾಲ ಹರಿಶ್ಚಂದ್ರನು ಆ ದನಿ ಕೇಳಿ ತಿಳಿದೆದ್ದನು. ನಿಟ್ಟಿರುಳು ಈ ಸುಡುಗಾಡಿನಲ್ಲಿ ಒಂದೇಸಮನಾಗಿ ರೋದಿಸುವ ವೀರನಾರಿಯಾವಳೋ ಕಾಣೆ ಎಂದುಕೊಂಡು ರಭಸದಿಂದ ನುಗ್ಗಿಬಂದು,

'ಎಲೈ ಮಾನಿನಿ, ನೆಲದಹಾಗ ಕೊಡದೆ ಸುಡಬಾರದು. ಮೀರಿ ಸುಟ್ಟೆಯಾದರೆ ವೀರಬಾಹುಕನ ಆಣೆ! ಕದ್ದು ಸುಡಬಂದರೆ ನಿನ್ನ ನಿಟ್ಟೆಲುವು ಮುರಿಯುವೆ' ಎಂದು ಚಂದ್ರಮತಿಯನ್ನು ಜರೆದು, ಗದರಿಸುತ್ತ ಅವಳು ಹಿಡಿದಿದ್ದ ಕಿಚ್ಚನ್ನು ಕೊಡವಿದನು. ಮುಟ್ಟಿಗೆಯ ಮೇಲಿದ್ದ ಮಗನ ಹಿಂಗಾಲು ಹಿಡಿದು ಸೆಳೆದುಬಿಟ್ಟನು.

**ಬಿಸುಡದಿರು ಬಿಸುಡದಿರು ಬೇಡಬೇಡಕಟಕಟ ಹಸುಳೆ ನೊಂದಹನು**

ತಕ್ಷಣ ಆ ತಾಯಿಯು,

'ಬಿಸುಡದಿರು, ಬಿಸುಡದಿರು. ಬೇಡ, ಬೇಡ. ಅಕಟಕಟ! ಹಸುಳೆ ನೋಯುವನು!' ಎಂದು ಹೇಳಿ ಎಳೆದೆಸೆದ ತನ್ನ ಮಗನನ್ನು ಎತ್ತಿ ಅಪ್ಪಿಕೊಂಡಳು! ಸ್ಮಶಾನದ ಕಾವಲುಗಾರನ ಕಡೆ ತಿರುಗಿ ಪ್ರಾರ್ಥಿಸಿದಳು,

'ಕರುಣಿಯೇ, ಕುಲವನ್ನು ನೋಡದೆ ಬೇಡಿಕೊಳ್ಳುತ್ತೇನೆ. ಇವನು ನನ್ನ ಮಗನಲ್ಲ, ನಿನ್ನ ಶಿಶುವೆಂದು ತಿಳಿದು ಸುಡಲು ಅನುಮತಿಕೊಡು.'

'ಎಲೆ ಮರುಳೆ ಹೆಣದ ಉಟ್ಟ ಉಡುಗೆ, ಸ್ಮಶಾನದ ಬಾಡಿಗೆಯ ಹಾಗವನ್ನು ಕೊಡದಿದ್ದರೆ ನೀನು ಏನೆಂದರೂ ಬಿಡುವುದಿಲ್ಲ.'

ಆಗ ಅಸಹಾಯಕ ನಿರ್ಗತಿಕ ಚಂದ್ರಮತಿಯು ಮತ್ತೆ ಕೇಳಿಕೊಂಡಳು.

'ನಾನು ಲೋಗರ ಮನೆಯ ಬಡದಾಸಿ, ಕೊಡಲೇನೂ ನನ್ನಲ್ಲಿ ಇಲ್ಲ. ಕೃಪೆತೋರು.'

'ನಿನ್ನ ಕೊರಳಲ್ಲಿರುವ ಕಡುಚೆಲುವಾದ ತಾಳಿಯನ್ನು ಅಡವಿಟ್ಟು ಬಳಿಕ ಬಿಡಿಸಿಕೊ' ಎಂದು ಹರಿಶ್ಚಂದ್ರ ನುಡಿಯಲು, ಚಂದ್ರಮತಿಯು ಅತಿನೊಂದು,

**ಜಗದ ನವನಿಧಿಗೊಡೆಯನಾತ್ಮಭವನೆನಿಸಿ ಮುಟ್ಟಿಗೆಯ ಸುಂಕದ ಹಾಗವಿಲ್ಲಾಯ್ತೆ ಮಗನೆ?**

'ಅಯ್ಯೋ, ನನ್ನ ಪೊಡವಿಪತಿ ಮಡಿದ! ಕೇಡುಂಟಾಯಿತು! ಹಾಗಿಲ್ಲದಿದ್ದರೆ ನನ್ನ ಗುಪ್ತ ಮಂಗಳಸೂತ್ರವನ್ನು ಈ ಕೀಳು ಜಾತಿಯವನು ಕಾಣಲು ಹೇಗೆ ಸಾಧ್ಯ!' ಎಂದು ತನ್ನ ಮನದಲ್ಲಿ ಅಂದುಕೊಂಡು ಪ್ರಕಟವಾಗಿ,

'ಅಯ್ಯೋ ನನ್ನ ಕಂದ, ಸಪ್ತ ದ್ವೀಪಾಧಿಪತಿಯ ಮಗನಾಗಿ ಹುಟ್ಟಿ, ನಿನಗೆ ಸುಡುಗಾಡು ಹಗೆಯಾಯಿತೆ? ಸಕಲಲೋಕಕ್ಕೆ ಆಜ್ಞೆಯನ್ನು ನೀಡಬಲ್ಲ ರಾಜನ ಕುಮಾರನಾದ ನಿನಗೆ ಈ ಚಂಡಾಲನು ಆಜ್ಞಾಪಿಸುವಂತಾಯಿತೆ? ಜಗತ್ತಿನ ನವನಿಧಿಗಳ ಒಡೆಯನಾದವನ ಮಗನೆನಿಸಿ ಮುಟ್ಟಿಗೆಯ ಸುಂಕದಹಾಗ ಇಲ್ಲವಾಯಿತೆ?' ಎನ್ನುತ್ತ ದುಃಖಿಸಿದಳು.

ಹರಿಶ್ಚಂದ್ರನು ಅವಳ ಅಳಲನ್ನು ಕೇಳಿ ನಡುಗಿ ಹೋದನು! ಇದು ವಿಶ್ವಾಮಿತ್ರಮುನಿ ತನಗೆ ಮಾಡಿದ ತೊಡಕಲ್ಲದೆ ಬೇರೆಯಲ್ಲ ಎಂದುಕೊಂಡು ಅತಿ ಸಂಕಟಕ್ಕೊಳಗಾಗಿ,

'ಎಲೆ ವನಿತೆ, ಈ ಲೋಕದಲ್ಲಿ ಆಜ್ಞೆಸಲ್ಲುವ ಯಾವ ದೊರೆಯಮಗ ಈ ಹುಡುಗ? ನೆಲದ ಬಾಡಿಗೆ ಕೊಡು ಎಂದು ಕೇಳಿದರೆ, ಕೊಡಲಾಗದೆ ದೊಡ್ಡವರ ಹೆಸರು ಹೇಳುವೆಯಾ? ಹಾಗೆಲ್ಲ ಹೇಳಿದರೆ ನಾನು ಬಿಡುವವನಲ್ಲ! ದುಃಖದ ಸಮಯದಲ್ಲಿ ಸುಳ್ಳು ಹೇಳಿ ಅತ್ತರೆ ಏನು ಪ್ರಯೋಜನ?"

'ಹಿಂದಿದ್ದ ಸಂಪತ್ತನ್ನು ನೆನೆದರೆ ಈಗ ಬರುವುದೆ? ಅದು ಹುಸಿಯಾಗಿ ಹೋಗಿದೆ.'

'ಆ ರಾಜನ ಹೆಸರೇನು? ಯಾರ ಮಗ? ಯಾವ ನಾಡಿನ ರಾಜ?'

'ಆತನು ರವಿಕುಲತಿಲಕನೆನ್ನುವ ತ್ರಿಶಂಕುವಿನ ಮಗ ಹರಿಶ್ಚಂದ್ರ ಅಯೋಧ್ಯಾಧಿಪತಿ.'

ಈ ನುಡಿ ಕೇಳಿ ದಿಗ್ಭ್ರಮೆಗೆ ಒಳಗಾದ ಹರಿಶ್ಚಂದ್ರನು, ತನ್ನನ್ನು ತಾನು ಸಾವರಿಸಿಕೊಂಡು ಕೇಳಿದ,

''ಅಂಗನೆ, ಕುಮಾರ ಏನಾದ? ಅವರೆಲ್ಲಿರುವರು?'

'ನಮ್ಮಿಬ್ಬರನ್ನು ಕೊಂಡುಕೊಂಡ ಒಡೆಯನ ಮನೆಗೆ ಹುಲುಹುಳ್ಳಿಯನ್ನು ತರಲು ನನ್ನ ಕಂದ ಕಾಡಿಗೆ ಹೋಗಿದ್ದನು. ಆಗ ಒಂದು ಸರ್ಪವು ಕಡಿದು ಮಡಿದನು. ಇದು ಇವನ ವಿಧಿ! ನನ್ನಪತಿ ಏನಾದನೊ?'

'ಆ ರಾಜ ಮಾತನಾಡಲು ಬರದೆ ಸಕಲ ರಾಜ್ಯವನ್ನು ಕಳೆದುಕೊಂಡು ಕಡೆಗೆ ಅತಿಸಾಲಗಾರನಾದನು. ದೇಶ ಭ್ರಷ್ಟನಾದನು. ಮಂತ್ರಿಯೊಡನೆ ಕಾಡು ಸೇರಿದನು. ಕೈಹಿಡಿದ ಹೆಂಡತಿ ಮಗನನ್ನು ಮಾರಿದನು. ಕೊನೆಗೆ ಸುಕ್ಷೇತ್ರ ಕಾಶೀಪುರದಲ್ಲಿ ಚಂಡಾಲ ಸೇವಕನಾಗಿರುವನು. ಅವನು ನಗೆಗೇಡೆಯಾದ ಪಾತಕ ಹರಿಶ್ಚಂದ್ರ, ಅವನನ್ನು ಏನೆಂದು ನೆನೆಯುವೆ?'

**ಎನಗಾ ಹರಿಶ್ಚಂದ್ರನಲ್ಲದಿನ್ನಾರು ಗತಿಮತಿ**

'ಹಾಗೆ ಹೇಳಬೇಡ. ನನ್ನಪತಿ ಸತ್ಯಸಂಧ. ಜಟಾಧಾರಿಯಾಗಿ ಚರ್ಮವನ್ನು ಉಟ್ಟು ಸುಡುಗಾಡಿನಲ್ಲಿದ್ದು, ನರಕಪಾಲವನ್ನು ಹಿಡಿದು ತಿರಿದು ವಿಷಉಂಡರೂ; ಶವ ಶಿರೋಮಾಲೆಗಳನ್ನು ಧರಿಸಿ ಭೂತಗಳೊಡನಿದ್ದರೂ ಶಿವನೇ ಅಖಿಲ ಲೋಕಕ್ಕೆ ಒಡೆಯ! ಅವನಲ್ಲದೆ ಬೇರೆ ಇಲ್ಲ! ಅದರಂತೆ ನನಗೆ ಹರಿಶ್ಚಂದ್ರನಲ್ಲದೆ ಬೇರೆ ಗತಿಮತಿ ಇಲ್ಲ!'

ಪತಿವ್ರತಾ ಶಿರೋಮಣಿಯ ವಚನ ಹರಿಶ್ಚಂದ್ರನ ಕರ್ಣಪಥವನ್ನು ಪ್ರವೇಶಿಸಿತು! ರಭಸದಿಂದ ಚಿತ್ತವನ್ನು ನುಗ್ಗು ನುರಿಯಾಗಿ ತುಳಿಯಿತು! ಧೈರ್ಯವನ್ನು ಅಳಿಸಿ ಹಾಕಿತು! ಕರಣಗಳನ್ನು ಕದಡಿತು! ಹೆಮ್ಮೆಯನ್ನು ಹರಿದುಹಾಕಿತು! ದುಃಖವನ್ನು ಹೊಡೆದೆಬ್ಬಿಸಿತು! ಕಂಬನಿಯು ಧಾರೆಯಾಗಿ ಹರಿಯಿತು!

ನೇಸರ ಕುಲಜನು ಲಜ್ಜಾನ್ವಿತನಾಗಿ ತಾನು ಮಾಡಿದ ಅಪರಾಧವನ್ನು ನೆನೆದನು. ಈ ಸತಿಯನ್ನು, ಈ ಶುಚಿಯನ್ನು, ಈ ಪತಿವ್ರತೆಯನ್ನು ಇಷ್ಟೊಂದು ಕಷ್ಟಕ್ಕೆ ಈಡು ಮಾಡಿದೆನಲ್ಲಾ? ಈ ಸೊಬಗ ಸುಕುಮಾರನನ್ನು ಸರ್ಪವು ಕಡಿದು ಸಾಯಿಸುವಂತೆ ಮಾಡಿದೆನಲ್ಲಾ ಎಂಬ ಅಸಹ್ಯ ವೇದನೆಗೆ ಒಳಗಾದನು. ಅಳುವನ್ನು ನಿಲ್ಲಿಸಲಾರದೆ, ತನ್ನನ್ನು ತಾನು ತಡೆಯಲಾರದೆ ಮಗನ ಮೇಲೆ ದೊಪ್ಪನೆ ಬಿದ್ದನು!

**ಮನನೊಂದು ಬೆರಗಾಗಿ ಚಿಂತಿಸುತ ತೂಕದ ಕೋಲ ತೊಲೆಯಾದಳು**

ಅದನ್ನು ಕಂಡು ಚಂದ್ರಮತಿಗೆ ಈತನೇ ತನ್ನ ಪತಿ ಎಂಬುದು ಸ್ಪಷ್ಟವಾಯಿತು. 'ಓ ನನ್ನ ಭಾಗ್ಯವೇ, ನಿನಗೆ ಸರಿಸಮಾನರಾದ ಭೂಪಾಲರನ್ನು ಓಲೈಸಿ ಧನವನ್ನು ಸಂಪಾದಿಸಿ ತರುವೆ. ನಮ್ಮ ಸೆರೆ ಬಿಡಿಸುವೆ ಎಂದು ನಾನಿದ್ದೆನು. ಚಂಡಾಲನಿಗೆ ಆಳಾಗಿ ಸುಡುಗಾಡು ಕಾಯುವ ದೌರ್ಭಾಗ್ಯ ನಿನಗಾಯಿತೆ ಭೂಪಾಲ' ಎಂದು ಹೇಳುತ್ತ ಗೋಳಾಡಿದಳು. ತನ್ನ ಇರುವಿನಬಗ್ಗೆ ಅಸಹ್ಯವೆನಿಸಿ ಚಿಂತಿಸುತ್ತಾ, ತೂಕದ ಕೋಲ ತೊಲೆಯಂತಾದಳು.

ತುಂಬಾ ವಿಚಲಿತ ಮನಸ್ಕನಾದ ಹರಿಶ್ಚಂದ್ರನು ಕಡುನೊಂದು,

'ಅಪ್ಪಾ ಮಗನೇ, ರಾಜ್ಯ ಭ್ರಷ್ಟನಾಗಿ ಚಂಡಾಲ ಸೇವಕನಾದ ಈ ಪಾಪಿಯನ್ನು ಅನುಸರಿಸಿ ಕೆಡದೆ, ನಿಮ್ಮಜ್ಜ ತ್ರಿಶಂಕು ಭೂವರನ ರೀತಿ ಸಕಲ ರಾಜ್ಯಕ್ಕೆ ಒಡೆಯನಾಗುವೆ ಎಂಬ ನಂಬಿಕೆಯಲ್ಲಿ ನಾನಿದ್ದೆನು. ಆದರೆ, ನೀನು ನಿಷ್ಕಾರಣವಾಗಿ ಮಡಿದೆಯಲ್ಲ ತಂದೆ' ಎಂದು ಒಂದೇಸಮನೆ ಅತ್ತು ತನ್ನ ಒಳಬೇಗೆಯನ್ನು ಹೀಗೆ ವ್ಯಕ್ತಪಡಿಸಿಕೊಂಡನು:

'ನನ್ನ ಒಲ್ಮೆಯ ಕುಡಿಯೆ, ನೀನು ಧರೆಗೆ ಶ್ರೇಷ್ಠವಾದ ವರಕಾಶಿಗೆ ಬಂದು, ವಿಶ್ವೇಶ್ವರನ ಪಾದಕಮಲವನ್ನು ಭಕ್ತಿಯಿಂದ ಪೂಜಿಸುವೆ; ಶಿವನನ್ನು ಮೆಚ್ಚಿಸಿ ಪಿರಿಯ ಸಿರಿಗೆ ಅರಸನಾಗಿ ಧರೆಯಲ್ಲಿ ಮೆರೆಯುವೆ; ದಿನಕರ ಕುಲದ ನೃಪರ ಹೆಸರನ್ನು ಶಾಶ್ವತವಾಗಿ ಬೆಳಗಿಸುವೆ ಎಂದು ನಂಬಿದ್ದೆ. ಹಾಗೆ ಬಾಳದೆ ಈ ರೀತಿ ಹಾವು ಕಡಿದು ಸಾಯುವುದೆ?

'ಮುಂದೆ ನೀನು ಆಳಲಿರುವ ಧರೆಯನ್ನು ಅನ್ಯರಿಗೆ ಕೊಟ್ಟುಬಿಟ್ಟೆನೆಂದು ನೀನು ನನ್ನೊಡನೆ ಮಾತನಾಡುವುದಿಲ್ಲವೆ? ನಿಮ್ಮಿಬ್ಬರನ್ನು ಮಾರಿಬಿಟ್ಟನೆಂದು ಕೋಪಿಸಿಕೊಂಡಿರುವೆಯಾ? ಚಾಂಡಲಸೇವೆ ಮಾಡಿ ನಿಂದೆಯಿಲ್ಲದ ಸೂರ್ಯಕುಲಕ್ಕೆ ಕುಂದು ತಂದವನೆಂದು ಮುನಿಸಿಕೊಂಡಿರುವೆಯಾ? ನೀನು ಮಾತಾಡದೆ ಇರುವ ಕಾರಣ ಹೇಳು ತಂದೆ.'

ಎನ್ನುತ್ತ ಕೊರಗಿ ಬಾಯ್ಬಿಟ್ಟು ಕರೆದು ಮಗನ ಮಾರುತ್ತರಕ್ಕಾಗಿ ಅವನನ್ನು ದಿಟ್ಟಿಸಿ ನೋಡಿದನು. ಮತ್ತೆ ದುಃಖ ಉಮ್ಮಳಿಸಿ ಬರಲು ತನ್ನ ಮನದ ಅಳಲಿಗೆ ನುಡಿಯ ರೂಪಕೊಟ್ಟು ಪ್ರಲಾಪಿಸಿದನು.

"ನನ್ನ ಮಗನಾದ ನೀನು ವೈರಿಗಳೊಡನೆ ಕಾದು ಮಡಿಯಲಿಲ್ಲ. ಮುನಿಶ್ರೇಷ್ಠರ ಯಾಗವನ್ನು ಕಾಯುವ ಕಾಯಕದಲ್ಲಿ ಹತನಾಗಲಿಲ್ಲ. ದೇವರಿಗೆ ಹಿತವಾಗಿ ಮಡಿಯಲಿಲ್ಲ. ನಿನ್ನ ದೇಹದ ಮಾಂಸವನ್ನು ಬೇಡಿದವರಿಗೆ ಕೊಟ್ಟು ಮರಣ ಹೊಂದಲಿಲ್ಲ. ಹುಲ್ಲನ್ನು ತರಲು ಹೋಗಿ ಕಾಡಿನಲ್ಲಿ ಬಡಹಾವು ಕಚ್ಚಿ ಸತ್ತುಹೋದೆ. ನಗೆಗೇಡಿಯಾಗಿ ನಿಷ್ಕಾರಣ

ಸಾಯುವುದೆ?" ಎಂದು ಒಂದೇ ಸಮನೆ ಮಗನನ್ನು ನೆನೆದು ಅಳುತ್ತಿರುವ ಪತಿಯನ್ನು ಕಂಡು; ತನ್ನ ಸಂಕಷ್ಟದ ಪರಿಸ್ಥಿತಿಯನ್ನು ನಿಭಾಯಿಸಲು ಚಂದ್ರಮತಿಯು,

"ನನ್ನರಸ, ಸುತನ ಮನ್ಮಥ ರೂಪಿನ ಸುಕುಮಾರತೆಯ ಚೆಲುವು, ಧೈರ್ಯ ಸಾಹಸ, ನೆನೆದು ಧೃತಿಗೆಡಬೇಡ. ಅವನ ಗುಣಗಳನ್ನು ನೆನೆದು ಶೋಕಿಸಬೇಡ, ಸಂತೈಸಿಕೊ. ಈಗ ನನ್ನ ಈ ಮಾತನ್ನು ಸಮಾಧಾನದಿಂದ ಕೇಳು' ಎಂದು ವಾಸ್ತವ ಜಗತ್ತಿನಲ್ಲಿ ಆಗ ಮಾಡಬೇಕಾದ ಕೆಲಸದ ಕಡೆ ತನ್ನ ಪತಿಯ ಗಮನವನ್ನು ಸೆಳೆದು ಮಾತು ಮುಂದುವರೆಸಿದಳು.

'ಅರಸನೇ, ಇರುಳು ಸರಿದುಹೋಗಿ ಸೂರ್ಯನು ಉದಯಿಸುವ ಹೊತ್ತಾಗುತ್ತಿದೆ. ನನ್ನ ಒಡೆಯನ ಕಡೆಯವರು ನನ್ನನ್ನು ಹುಡುಕುತ್ತ ಬಂದು ಎಳೆದೊಯ್ದು ಬಡಿಯುವರು. ಈಗ ಕುಮಾರನನ್ನು ದಹಿಸಬೇಕು.'

ಈ ಮಾತು ಕೇಳಿ ಕರ್ತವ್ಯ ಜಾಗೃತನಾದ ಹರಿಶ್ಚಂದ್ರನು ಯಾವ ಸಂಬಂಧಗಳ ಅಣುವೂ ಅಂಟದವನ ರೀತಿ ಹೀಗೆ ಹೇಳಿದನು:

'ಮಸಣವಾಡಗೆಯನ್ನು ಕೊಡದೆ ಸುಡಬಾರದು. ಇದ್ದರೆ ಕೊಡು. ಇಲ್ಲದಿದ್ದರೆ ಬೇಗನೆ ಹೋಗಿ ನಿನ್ನೊಡೆಯನನ್ನು ಬೇಡಿ ತೆಗೆದುಕೊಂಡು ಬಾ. ತರದಿದ್ದರೆ ಸುಡಬೇಡ.'

'ಒಡೆಯರು ಕೊಡುವವರಲ್ಲ.'

**ಋಣ ಹುಟ್ಟದಿರ್ದಡೆ ಸುಡುವ ಗೊಡವೆ ಬೇಡ**

'ಬೇಡಿ ನೋಡು. ಕೊಡದಿದ್ದರೆ ಸಾಲ ಮಾಡು. ಸಾಲ ಹುಟ್ಟದಿದ್ದರೆ ಸುಡುವ ಗೊಡವೆ ಬೇಡ! ನನ್ನ ಪಾಲಿಗೆ ಬಂದಷ್ಟು ಬರಲಿ' ಎಂದು ಹೇಳಿದ ಹರಿಶ್ಚಂದ್ರನು ಲೋಹಿತಾಶ್ವನು ಉಟ್ಟಿದ್ದ ಬಟ್ಟೆಯನ್ನು ತೆಗೆದುಕೊಂಡು ತನ್ನ ಕಾಯುವ ಗುಡಿಸಿಲಿನ ಕಡೆ ನಡೆದನು.

ಚಂದ್ರಮತಿಯು ಮಗನನ್ನು ಸುಡಲಾರದೆ, ಮಸಣವಾಡಗೆಯನ್ನು ತರುವುದಕ್ಕಾಗಿ, ಸ್ಮಶಾನದಿಂದ ಪುರಕ್ಕೆ ನಡೆದು ಬರುತ್ತಿದ್ದಳು.

ಕೌಶಿಕಮುನಿಯು ಭೂಪತಿಯ ಸತಿಯನ್ನು ಅತಿಯಾಗಿ ಕಾಡಬೇಕೆಂದು ಒಂದು ಉಪಾಯವನ್ನು ಯೋಚಿಸಿದನು. ಅದರಂತೆ ಮಾಯೆಯಿಂದ ಕೆಲವು ಚೋರರನ್ನು ಸೃಷ್ಟಿಸಿ ಅವರಿಗೆ ಹೀಗೆ ಆಜ್ಞಾಪಿಸಿದನು,

'ಇಂದು ನೀವು ಕಾಶಿಪುರವನ್ನು ಆಳುವ ಅರಸನ ಅರಮನೆಗೆ ಹೋಗಿ ಅವನ ಮಗನನ್ನು ಕೊಲ್ಲಿ, ಚಂದ್ರಮತಿ ಬರುವ ದಾರಿಯಲ್ಲಿ ಇರಿಸಿರಿ!' ಯತಿಯ ಆಜ್ಞೆಯನ್ನು ಪಾಲಿಸಲು ಅವರು ಕಾಶಿಪಟ್ಟಣವನ್ನು ಸೇರಿದರು.

# ವಿಶ್ವೇಶ್ವರ ಸಾಕ್ಷಾತ್ಕಾರ

ಚೋರರು ಕಾಶಿಪುರದ ರಾಜನ ಅರಮನೆ ಹೊಕ್ಕು ಅವನ ಮಗನನ್ನು ಅಪಹರಿಸಿದರು. ಚಂದ್ರಮತಿ ಬರುವ ಇಕ್ಕಟ್ಟಾದ ದಾರಿಯಲ್ಲಿ ಆ ಮಗುವಿನ ಕೊರಳನ್ನು ಕತ್ತರಿಸಿದರು. ಅದು ಒರಲಿತು.

**ಅತಿ ದುಃಖಿಗುಂಟೇ ಬುದ್ಧಿ ಜಗವರಿಯಲು**

ಆಕ್ರಂದನವನ್ನು, ಕಿರಿಚಲನ್ನು ಕೇಳಿದ ಚಂದ್ರಮತಿಯು ತನ್ನ ಮಗನು ಪ್ರಾಣ ಕಳೆದುಕೊಂಡು ಸುಡುಗಾಡಿನಲ್ಲಿ ಬಿದಿದ್ದಾನೆ ಎಂಬುದನ್ನು ಮರೆತಳು. ಅದು ತನ್ನ ಮಗನೇ ಎಂಬ ಭ್ರಮೆಗೊಳಗಾದಳು! ಮತ್ತಾರೋ ನೋವು ವ್ಯಥೆಯಿಂದ ಒರಲುತ್ತಿರುವರು ಎಂಬ ವಿವೇಚನೆಗೆ ಒಳಗಾಗದೆ ಹೋದಳು. ಅತಿ ದುಃಖಿಗೆ ಜಗವನ್ನು ತಿಳಿಯುವ ಬುದ್ಧಿಯುಂಟೆ?

ಚಂದ್ರಮತಿಯು ಹತ್ತಿರಕ್ಕೆ ಬರಲು, ಚೋರರು ಆ ಮಗುವನ್ನು ಬಿಟ್ಟು ಓಡಿದರು. ಬಸವಳಿದ ಆ ಹಸುಳೆಯನ್ನು ತನ್ನ ಮಗನೇ ಎಂದು ಬಗೆದ ಅವಳು ಅತ್ತು ಅತ್ತು ತಲೆದಡವಿದಳು. ಅಷ್ಟರಲ್ಲಿ ಕೊಂಬು ಕಹಳೆಯೂದುತ್ತ, ಬೊಂಬುಳಿ ಭೇರಿಗಳನ್ನು ಬಾರಿಸುತ್ತ ರಾಜನ ಭಟರು ಮಗನನ್ನು ಹುಡುಕುತ್ತ ಬಂದರು. ಅವಳ ತೋಳತೆಕ್ಕೆಯಲ್ಲಿದ್ದ ರಾಜಕುಮಾರನನ್ನು ಕಂಡು ಬಂಧಿಸಿದರು.

'ಇವಳು ರಾಕ್ಷಸಿಯೇ ಆಗಿರಬೇಕು. ಇವಳನ್ನು ನಾವು ಕೊಲ್ಲುವುದು ಬೇಡ. ಇವಳನ್ನು ಕದ್ದಮಾಲು ಸಮೇತ ರಾಜನಲ್ಲಿಗೆ ಕೊಂಡೊಯ್ಯೋಣ' ಎಂದು ನಿಶ್ಚಯಿಸಿದರು. ಎಡಗೈಗೆ ಹಗ್ಗವನ್ನು ಬಿಗಿದು ಬಂಧಿಸಿದರು. ಕತ್ತು ಕತ್ತರಿಸಿದ ಮಗುವನ್ನು ಅವಳ ಮೇಲೆಯೇ ಹೊರಿಸಿದರು. ಅದರ ತಲೆಯಿಂದ ಸುರಿವ ರಕ್ತ ಸೋರಿ ಅವಳುಟ್ಟಿದ್ದ ಸೀರೆ ತೊಪ್ಪನೆ ತೋಯ್ದು ಹೋಯಿತು. ಹಿರಿದ ಕತ್ತಿಗಳ ಪಹರೆಯಲ್ಲಿ, ಆ ಲಲನೆಯನ್ನು ರಾಜಬೀದಿಯಲ್ಲಿ ನಡೆಸಿಕೊಂಡು ಹೋದರು.

**ನಿನ್ನ ಮಗನಂ ಕೊಂದ ಪಾಪಿಯಾನೆಂದಾಡಿಯನ್ಯಾಯದಿಂ ಸಾವೆನು**

ಆಗ ಚಂದ್ರಮತಿಗೆ ಇವರು ನನ್ನನ್ನು ಪ್ರಶ್ನಿಸಿದರೆ ಏನು ಉತ್ತರ ಕೊಡುವುದು ಎಂಬ ಯೋಚನೆಯಾಯಿತು. ಈ ಮೊದಲು ಯಾವಾವ ದುಃಖ ಒದಗಿದವು ಅದನ್ನು ಕಂಡು ಉಂಡೆನು. ಇನ್ನೇನು ಕಾಣಲಿರುವೆನೊ ಎಂದು ಚಿಂತೆಗೊಳಗಾದಳು. ತನ್ನ ಸಹನೆಯ ಎಲ್ಲೆ ಮೀರಲು ನಿಜ ಹೇಳಿ ಬದುಕುವುದಕ್ಕಿಂತ ಸುಳ್ಳು ಹೇಳಿ ಸಾಯುವುದೇ ಮೇಲು ಎಂದುಕೊಂಡಳು. ರಾಜನು ಕೇಳಿದರೆ – ನಿನ್ನ ಮಗನನ್ನು

ಕೊಂದ ಪಾಪಿ ನಾನೇ ಎಂದು ಹೇಳುವೆನು. ಕದ್ದಮಾಲಿನ ಸಮೇತ ಸಾಯುವೆನು–ಎಂಬ ತೀರ್ಮಾನಕ್ಕೆ ಬಂದಳು. ಅಷ್ಟರಲ್ಲಿ ಭಟರು ಅವಳನ್ನು ಗದ್ದಲ ಗಲಾಟೆಯಿಂದ ಕೂಡಿದ ರಾಜನ ಓಲಗಕ್ಕೆ ತಂದಿದ್ದರು.

ಅಲ್ಲಿ ಕೋಪಾಗ್ನಿಯ ರೂಪಿನಂತಿರುವ ರಾಜನು ಉಪ್ಪರಿಗೆ ಜರಿದು ಅಲ್ಲಾಡುವಂತೆ ಆದೇಶಗಳನ್ನು ಕೊಡುತ್ತಿದ್ದನು.

'ಅಲ್ಲಿ ನೋಡಿ. ಇಲ್ಲಿ ನೋಡಿ. ಕುದುರೆಗೆ ಜೀನು ಹಾಕಿ, ಆಯುಧಗಳೊಡನೆ ಹೊರಡಿ. ಅರಮನೆಯನ್ನೆಲ್ಲ ಶೋಧಿಸಿ. ದಾರಿಯಲ್ಲಿ ಮಗುವಿನ ಕಳ್ಳರನ್ನು ಕಂಡರೆ ಕೊಲ್ಲಿರಿ. ತಿವಿದು ಚರ್ಮಸುಲಿಯಿರಿ.'

ಆಗ ಚಂದ್ರಮತಿಯನ್ನು ಹಿಡಿದುತಂದ ಭಟರು ರಾಜನಿಗೆ,

'ರಾಜೇಂದ್ರನೇ, ಹಸುಳೆಯನ್ನು ಕೊಂಡೊಯ್ದು ರಕ್ಕಸಿಯನ್ನು ಹಿಡಿದು ತಂದಿದ್ದೇವೆ' ಎಂದು ಹೇಳಿದರು. ಅವಳನ್ನು ನೋಡಿದ ವಿಚಾರಪರನಾದ ರಾಜನು ಶಂಕೆಗೆ ಒಳಗಾಗಿ ಪ್ರಶ್ನಿಸಿದನು.

'ನೀನು ಯಾರು? ಎಲ್ಲಿಯವಳು? ನನ್ನ ಸುಕುಮಾರನನ್ನು ಏಕೆ ಕೊಂದೆ?'

'ರಾಜನೇ, ನಾನು ರಾಕ್ಷಸಿಯಲ್ಲ, ಮನುಷ್ಯಳು. ಹಣದ ಆಸೆಯಿಂದ ಮಗುವನ್ನು ಕೊಂಡೊಯ್ದು ಕೊಂದೆನು. ನಿನಗೆ ಸರಿಕಂಡಂತೆ ನನ್ನನ್ನು ಶಿಕ್ಷಿಸು.'

'ಎಲೆ ಹೆಣ್ಣೆ, ಹೆದರದೆ ಗಾಬರಿಗೊಳ್ಳದೆ ಹೇಳು. ಇದು ನೀನು ಮಾಡಿದ ಕೆಲಸವೊ ಅಥವಾ ಬೇರೆ ಯಾರಾದರೂ ಮಾಡಿರುವುದೊ? ಧರ್ಮಾಧಿಕಾರಿಗಳನ್ನು ಕರೆಸುವೆ. ಅವರ ಮುಂದೆ ವಿಚಾರಣೆ ನಡೆಸುವೆ. ನಿನ್ನನ್ನು ರಕ್ಷಿಸುವೆ' ಎಂದು ರಾಜ್ಯ ಪರಿಪಾಲನಾಚತುರ ಕಾಶಿರಾಜನು ನುಡಿದನು. ತನ್ನ ತಪ್ಪಿಲ್ಲದೆ ಕಷ್ಟ ಪರಂಪರೆಯಲ್ಲಿ ದಹಿಸಿ ಹೋಗಿದ್ದ ಚಂದ್ರಮತಿಯು – ಈ ನೆಲದ ಜನ ಇಲ್ಲಿಯ ಬದುಕು ಹೀಗೆಯೇ, ಇಷ್ಟೆ ಎಂಬ ನಿರ್ಧಾರಕ್ಕೆ ಬಂದು–ಜೀವದಾಸೆಯನ್ನು ತೊರೆದು ಹೇಳಿದಳು.

'ಭೂಪಾಲನೇ, ಇದಕ್ಕೆ ಧರ್ಮಾಧಿಕಾರಿಗಳೇಕೆ? ಕೊಂದಿರುವುದು ನಿಜ. ಸತ್ತ ಶಿಶು ನನ್ನ ಕೈಯಲ್ಲಿದೆ. ಇದಕ್ಕೆ ತಕ್ಕನಾದ ಶಿಕ್ಷೆಯನ್ನು ನೀಡು.'

ಅಲ್ಲಿ ನೆರೆದಿದ್ದ ಜನ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಹೀಗೆ ಹೇಳುತ್ತಿದ್ದರು: 'ಕೊಂದೆ, ಕೊಂದೆ ಎಂದು ತಾನೇ ಹೇಳುವಾಗ ಇನ್ನು ಬೇರೆ ಮಾತೇಕೆ?' 'ತುಂಡು ತುಂಡಾಗಿ ಕತ್ತರಿಸಬೇಕು.' 'ಕಿವಿ ಮೂಗುಗಳನ್ನು ಕೊಯ್ಯಬೇಕು.' 'ಭರ್ಜಿಯಿಂದ ತಿವಿಯಬೇಕು'

ರಾಜನು ಆಲೋಚಿಸಿ ವೀರಬಾಹುಕನನ್ನು ಕರೆಸಿ,

'ಎಲೈ ವೀರಬಾಹುಕನೇ, ಇವಳು ರಾಜಕುಮಾರನನ್ನು ಕೊಂದ ಪಾತಕಿ. ಇವಳನ್ನು ಎಳೆದೊಯ್ದು ಅನಾಮಿಕನ ಕೈಯಲ್ಲಿ ಕೊಲ್ಲಿಸು' ಎಂದು ಆಜ್ಞೆ ಮಾಡಿದನು. ರಾಜಭಟರು ವೀರಬಾಹುಕನಿಗೆ ಚಂದ್ರಮತಿಯನ್ನು ಒಪ್ಪಿಸಿದರು.

**ಸುಡುಗಾಡನತ್ಯಾನಂದದಿಂ ಕಾವ ಚಂದುಗನ ಕಯ್ಯೊಳೀ ಹೀನವನಿತೆಯ ಕೊಲಿಸುವೆಂ**

ವೀರಬಾಹುಕನು 'ಏನೆಂದರೂ ಮಾಡುವೆ ಎಂದು ಸ್ಮಶಾನವನ್ನು ಅತ್ಯಾನಂದದಿಂದ ಕಾಯುವ ಚಂದುಗನ ಕೈಯಲ್ಲಿ ಈ ಹೀನವನಿತೆಯನ್ನು ಕೊಲ್ಲಿಸುವೆ. ಅವನನ್ನು ಕರೆಯಿರಿ' ಎಂದು ತನ್ನ ಆಳುಗಳಿಗೆ ಆದೇಶಿಸಿದನು. ಅವರೊಡನೆ ವೀರಬಾಹುಕ ಪ್ರೀತಿಯಿಂದ 'ಚಂದುಗ' ಎಂದು ಕರೆಯುವ ಹರಿಶ್ಚಂದ್ರನು ಬಂದನು.

ವೀರಬಾಹುಕನು ಹರಿಶ್ಚಂದ್ರನನ್ನುದ್ದೇಶಿಸಿ,

'ಎಲೈ ಚಂದುಗ, ವಸುಧಾಧಿಪತಿಯ ಪ್ರೀತಿಯ ಮಗನನ್ನು ಕೊಂದಿರುವ ಈ ರಾಕ್ಷಸಿಯನ್ನು ರುದ್ರಭೂಮಿಗೆ ಎಳೆದೊಯ್ಯಿ. ತಪ್ಪದಂತೆ ಇವಳ ಕೊರಳನ್ನು ಕತ್ತರಿಸಿ ಬಿಸಾಡು' ಎಂದು ಆಜ್ಞೆ ಮಾಡಿದನು.

ಹರಿಶ್ಚಂದ್ರನು ಚಂದ್ರಮತಿಯ ಮುಂದಲೆಯನ್ನು ಒತ್ತಿ ಹಿಡಿದು ಕುಕ್ಕಿದನು. ಕೈಗಳನ್ನು ಹಿಂದಕ್ಕೆ ಬಿಗಿದು ಕಟ್ಟಿ, ಹಗ್ಗದಿಂದ ಹೊಡೆದನು. ಪಾಪಿ, ಹೊಲತಿಯೆಂದು ಹೀಗಳೆಯುತ್ತ ರುದ್ರಭೂಮಿಯ ತಾನಿದ್ದ ಜಾಗಕ್ಕೆ ಎಳೆದುತಂದನು.

ಇಂದು ನನ್ನ ಕುಲದವನಾದ ಹರಿಶ್ಚಂದ್ರನನ್ನು ಹದಿನಾಲ್ಕು ಲೋಕಗಳು ತಿಳಿಯುವಂತೆ ಕಾಶಿವಿಶ್ವನಾಥನು ಅನುಗ್ರಹಿಸುವನು. ಆ ಸಡಗರವನ್ನು ನೋಡುವೆನು ಎಂಬಂತೆ ಉದಯಗಿರಿ ಶಿಖರದಲ್ಲಿ ಸೂರ್ಯನು ಉದಯಿಸಿದನು.

ಹರಿಶ್ಚಂದ್ರನು ಚಂದ್ರಮತಿಯ ಹಿಂಗೈಯನ್ನು ಬಿಗಿದ ಹಗ್ಗವನ್ನು ಕೊಯ್ದು ಬಿಸಾಡಿದನು. ಎತ್ತರವಾದ ಸ್ಥಳದಲ್ಲಿ ಪೂರ್ವಾಭಿಮುಖವಾಗಿ ಕುಳ್ಳಿರಿಸಿದನು. ಹಿಂದೆ ಎಡದಲ್ಲಿ ಕುಸಿದು, ನೀಡಡಿಯಿಟ್ಟು ನಿಂದನು. ಖಡ್ಗವನ್ನು ಸೆಳೆದು ಜಡಿದು ತಲೆಯ ಹಿಂಭಾಗಕ್ಕೆ ಮುಟ್ಟಿಸಿ ಸರಿಯಾಗಿ ನಿಂತುಕೊಂಡನು. ಕುತ್ತಿಗೆ ಕತ್ತರಿಸಿ ಬೀಳುವಂತೆ ಹೊಡೆಯಲು ಸಿದ್ಧವಾಗಿ ಹೇಳಿದನು.

'ಎಲೆ ಸ್ತ್ರೀಯೇ, ಸಿದ್ಧವಾದೆ, ಸಿದ್ಧವಾದೆ! ಸಿದ್ಧಳಾಗು, ಆಗು. ನಿನ್ನ ದೈವವನ್ನು ನೆನೆ. ನಿನ್ನ ಒಡೆಯನನ್ನು ಹರಸು!'

ಆಗಸದಲ್ಲಿ ನೆರೆದ ದೇವತೆಗಳು ನೋಡುತ್ತ,

'ಎಲೆಲೆ ಶಿವ ಶಿವ! ಹೊಡೆಯುವನು! ಹೊಡೆಯುವನು! ಅಷ್ಟ ಮೂರ್ತಿ ಶಿವನೇ ಅಬಲೆಯನ್ನು ರಕ್ಷಿಸು. ದುರ್ಮೋಹಿ ವಿಶ್ವಾಮಿತ್ರ ಪಾಪಿಯೇ, ಇನ್ನಾದರೂ ಸತಿಯ ಕೊಲೆಯನ್ನು ನಿಲ್ಲಿಸು' ಎಂದು ಬೇಡಿಕೊಂಡರು.

**ಭೂ ಚಂದ್ರಾರ್ಕತಾರಂಬರಂ ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾಳಲಿ**

ಶಾಂತಚಿತ್ತದ ಚಂದ್ರಮತಿಯು ಪದ್ಮಾಸನದಲ್ಲಿ ಕುಳಿತು, ಕಣ್ಣುಗಳನ್ನು ಮುಚ್ಚಿ, ಬೊಗಸೆಗೈಯಲ್ಲಿ ಗುರು ವಸಿಷ್ಠನಿಗೆ ನಮಸ್ಕರಿಸಿದಳು. ಶಿವನ ನಿರ್ಮಲ ರೂಪವನ್ನು ನೆನೆದಳು. ತಿರುಗಿ ಮೇಲೆ ನೋಡುತ್ತ,

'ಈ ಭೂಮಿ, ಸೂರ್ಯ, ಚಂದ್ರ, ತಾರೆಗಳಿರುವ ತನಕ ಹರಿಶ್ಚಂದ್ರರಾಯನು ಸತ್ಯವಂತನಾಗಿ ಬಾಳಲಿ. ಮಗನಿಗೆ ಮುಕ್ತಿ ದೊರಕಲಿ. ಮಂತ್ರಿಯ ಮನೋಭಿಷ್ಟವು ನೆರವೇರಲಿ. ರಾಜ್ಯದ ಒಡೆಯ ವಿಶ್ವಾಮಿತ್ರನು ಚಿರಕಾಲ ಜೀವಿಸಲಿ, ಇದೇ ನನ್ನ ಹರಕೆ, ಹೊಡಿ' ಎಂದಳು.

ಹರಿಶ್ಚಂದ್ರನು ಆ ಹರಕೆಯನ್ನು ಕೇಳಿ ಹವ್ವನೆ ಹಾರಿ ಬೆರಗಾಗಿ ಮರವಟ್ಟು ನಿಂತನು! 'ಭಾಪುರೇ! ವಿಧಿಯು ಮುಳಿಸಿನಿಂದ ಹೋದಇರುಳು ಸುತನ ದುರ್ಮರಣವನ್ನು ತೋರಿತು. ಅದರ ಜೊತೆಗೆ ಈಗ ನಾನೇ ನನ್ನ ಕಯ್ಯಾರ ಕತ್ತಿ ಹಿಡಿದು ನನ್ನ ಪವಿತ್ರ ಮಡದಿಯ ತಲೆಯನ್ನು ಕಡಿಯುವಂತೆ ಮಾಡಿತು. ಇದಕ್ಕೆಲ್ಲಾ ನಾನು ಹೇಸುವವನಲ್ಲ. ಪತಿಯ ಆಜ್ಞೆ ಉಳಿದರೆ ಸಾಕು' ಎಂದು ಮನಸ್ಸನ್ನು ದೃಢಪಡಿಸಿಕೊಂಡು ಕೊಲ್ಲಲು ಅನುವಾದನು.

ಯಾವುದೇ ರೀತಿಯ ಶಂಕೆಗೂ ಒಳಗಾಗದೆ ಹೊಡೆಯಲು ತಯಾರಾದ ಸಮಚಿತ್ತದ ಹರಿಶ್ಚಂದ್ರರಾಜನನ್ನು ವಿಶ್ವಾಮಿತ್ರನು ನೋಡಿದನು. ಅಂತಹ ವಿಷಮ ಸನ್ನಿವೇಶಕ್ಕೆ ಕಾಯ್ದು ಕುಳಿತಂತೆ ಆಕಾಶದಿಂದಲೇ ಕೂಗಿ ಹೇಳಿದನು,

'ಎಲವೋ ಹರಿಶ್ಚಂದ್ರ, ನನ್ನ ಮಾತನ್ನು ಕೇಳು. ಹೊಡೆಯಬೇಡ ನಿಲ್ಲು. ಈಗಲೂ ನನ್ನ ಪುತ್ರಿಯರನ್ನು ಮದುವೆಯಾದರೆ, ನಿನ್ನ ಸತ್ತ ಮಗನನ್ನು ಉಳಿಸುವೆನು. ನಿನ್ನ ಮಡದಿಯನ್ನು ರಕ್ಷಿಸುವೆನು. ನಿನ್ನ ಸಿರಿಯನ್ನು ನಿನಗೆ ಹಿಂದಿರುಗಿಸುವೆನು. ನಿನ್ನನ್ನು ಬಂಧನ ಮೋಕ್ಷನನ್ನಾಗಿ ಮಾಡುವೆನು. ನಿನಗೆ ರಾಜ್ಯವನ್ನು ಕೊಟ್ಟು ಮೊದಲಿನಂತೆ ಇರಿಸುವೆನು'

ಆ ನುಡಿ ಕೇಳಿ, ತಲೆ ಎತ್ತಿ ವಿಶ್ವಾಮಿತ್ರಮುನಿಗಳನ್ನು ನೋಡಿದ ಹರಿಶ್ಚಂದ್ರನು ಎತ್ತಿಹಿಡಿದ ಖಡ್ಗವನ್ನು ಜಡಿಯುತ್ತ ಹೀಗೆ ಹೇಳಿದನು.

**ನನ್ನಿಕಾರಂ ವಧುವನೆಲೆಲೆ ಶಿವಶಿವ ಮಹಾದೇವ ಹೊಡೆದಂ ಹೊಡೆದನು.**

'ಮುನಿಶ್ರೇಷ್ಠರೇ, ತಮ್ಮ ಹಿರಿಯತನಕ್ಕೆ ಈ ಮಾತು ಯೋಗ್ಯವೆ? ಕೇಳಿ. ನನ್ನ ಸಿರಿಸಂಪತ್ತು ಹೋದರೇನು? ರಾಜ್ಯ ಹೋದರೇನು? ನಾನು ಯಾರ ಸೇವೆ ಮಾಡಿದರೆ ಏನು? ನನ್ನ ಪುತ್ರನ ಪ್ರಾಣ ಹೋದರೇನು? ನಾನು ನನ್ನ ಪತ್ನಿಯನ್ನು ಕೊಂದರೇನು? ಅದು ತಪ್ಪಲ್ಲ! ಸತ್ಯವನ್ನು ಬಿಡದೆ ಪಾಲಿಸಿದೆನು ಎನಿಸಿದರೆ ಸಾಕು!

'ನನ್ನ ದುಷ್ಕರ್ಮ ವಶದಿಂದಾದ ಕರ್ಮ ಇದೆಂದು ಇಲ್ಲಿಯತನಕ ತಿಳಿದಿದ್ದೆನು. ಆದರೆ ನಿಮ್ಮ ಉಪದ್ರವದಿಂದ ಅನಾಮಿಕನಾದವನು ಸತಿಯ ಕೊಲೆಗೆ ಹೇಸಿ ಹಿಮ್ಮೆಟ್ಟುವೆನೆ? ನಿಮ್ಮ ಕಪಟಕ್ಕೆ ನಾನು ಬಾಗುವೆನೆ? ಸಡಿಫಡಿ' ಎಂದು ಗಟ್ಟಿಯಾಗಿ ಹೇಳುತ್ತ ಶಿವ ಶಿವ ಮಹಾದೇವ ಸತ್ಯವಂತ ಹರಿಶ್ಚಂದ್ರನು ಹೆಂಡತಿಯನ್ನು ಕತ್ತಿಯಿಂದ ಹೊಡೆದನು!

ಹೊಡೆದ ಖಡ್ಗದ ಬಾಯ ಕಡೆಯಿಂದ, ಚಂದ್ರಮತಿಯ ಕೊರಳ ಪ್ರದೇಶದಿಂದ ಕೆಂಜೆಡೆಯ, ಶಶಿಕಳೆಯ, ಗಂಗಾಧರ, ಉರಿಗಣ್ಣಿನ, ಫಣಿ ಕುಂಡಲದ ಪಂಚಮುಖಶಿವ ಮೂಡಿಬಂದನು! ಎಡದಲ್ಲಿ ಗಿರಿಜೆಯನ್ನು ಹೊಂದಿ, ದಶಭುಜದಲ್ಲಿ ಶೋಭಿಸುತ್ತ, ಹುಲಿಯುಡುಗೆಯೊಡನೆ ಮೆಲ್ಲಡಿಯಿಡುತ್ತ ಕಾಶಿರಮಣ ವಿಶ್ವನಾಥನು ಬಂದನು! ದೇವತೆಗಳು ಹರ್ಷಗೊಂಡು ಜಯ ಜಯ ಜಯಕಾರ ಮಾಡಿದರು.

**ಸರ್ವದೇವರು ಬಂದರಪ್ರತಿಮದೇವಾಧಿದೇವ ಪಂಪಾವಿರೂಪಾಕ್ಷನೆಡೆಗೆ**

ಪರಮೇಶ್ವರನು ಕರುಣಿಸಿದ ಪುಣ್ಯ ವಾರ್ತೆಯನ್ನು ಕೇಳಿ ಗಣೇಶ್ವರರು, ಅಷ್ಟವಸುಗಳು, ನವಬ್ರಹ್ಮರು, ಸುರರು, ಖೇಚರರು, ಯಕ್ಷರು, ಮಯೂರರು, ಗರುಡರು, ಗುಹ್ಯಕರು, ಸಿದ್ಧರು, ಉರಗ ಮುಖ್ಯರು, ದನುಜರು ತಮ್ಮ ಪರಿವಾರ ಸಹಿತ ಅಲ್ಲಿ ನೆರೆದರು.

ಅಪ್ರತಿಮದೇವ ಪಂಪಾವಿರೂಪಾಕ್ಷನಲ್ಲಿಗೆ ವಿಷ್ಣು, ಬ್ರಹ್ಮ, ದೇವೇಂದ್ರ, ವಿನಾಯಕ, ಷಣ್ಮುಖ, ದ್ವಾದಶ ರವಿಗಳು, ಮನ್ಮಥ, ನವಗ್ರಹ ಮುಂತಾದ ಸಕಲ ದೇವತೆಗಳು ಬಂದರು.

ಕುಡಿದ ಔಷಧವು ಬಾಯಿಗೆ ಕಹಿಯಾದರೂ ಒಡಲಿಗೆ ಸುಖಕರವಾದುದು. ಹಾಗೆ ವಿಶ್ವಾಮಿತ್ರನು ಲೋಕದ ಕಣ್ಣಿಗೆ ಅತಿ ಕೋಪಿಸಿಕೊಂಡಂತೆ ತೋರಿದರೂ ಹರಿಶ್ಚಂದ್ರನು ಸತ್ಯಶುದ್ಧನಾಗುವವರೆಗೂ ಕಾಡಿ ನೋಡಿದನು. ಆ ಮುನಿಯು ಶಿವನನ್ನು ಗಣಸಮೇತ ಎಳೆತಂದು ರಾಜನ ಕೀರ್ತಿ ಮೂರು ಲೋಕಕ್ಕೆ ತಿಳಿಯುವಂತೆ ಮಾಡಿದನು. ಆ ಮುನಿವರೇಣ್ಯನು ವಸಿಷ್ಠಮುನಿ ಸಮೇತ ಅಲ್ಲಿಗೆ ಆಗಮಿಸಿದನು.

ಅಂಬರದಿಂದ ದೇವತೆಗಳು ಹೂಮಳೆ ಸುರಿಸಿದರು. ಶಂಖದ ಮೊಳಗು; ಹಲಗೆ, ನಿಸ್ಸಾಳ, ಭೇರಿಗಳ ಆರ್ಭಟ; ಕೊರಳೆತ್ತಿ ಕರೆವ ಕೊಂಬು ಕಹಳೆಗಳ ಏರುದನಿಗಳ ಜೊತೆ ಹಲವಾರು ವಾದ್ಯಗಳ ಮಹಾರವ ಅಲ್ಲಿ ಮೇಳೈಸಿತ್ತು. ಆ ಸಡಗರ, ಸಂಭ್ರಮ, ಆಡಂಬರದ ನಡುವೆ ಗಿರಿಜೇಶನು ಹರಿಶ್ಚಂದ್ರನನ್ನು ಅಪ್ಪಿಕೊಂಡನು.

'ಹೇ ಪರಮೇಶ್ವರನೇ, ಚಂಡಾಲ ಕಿಂಕರನಾಗಿ, ಹೊಲೆವೇಷ ಹೊತ್ತು ಸುಡುಗಾಡು ಕಾದವನು. ಶವಶಿರದ ಅಕ್ಕಿಯನ್ನುಂಡು ಜೀವಿಸುತ್ತ; ಮಗಸತ್ತಿದ್ದನ್ನು ಕಂಡು, ಘನ ಪತಿವ್ರತೆಯಾದ ಪತ್ನಿಯನ್ನು ಕೊಂದವನು. ನೀಚನೂ ಮೂರ್ಖನೂ ಆದವನು

ನಾನು. ನನ್ನ ಸ್ಥಳಕ್ಕೆ ಪಾವನಮೂರ್ತಿಗಳಾದ ತಾವು ಏಕೆ ಆಗಮಿಸಿದಿರಿ?' ಎಂದು ಹೇಳುತ್ತ ಹರಿಶ್ಚಂದ್ರನು ಅಭವನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಆಗ ಪಾವನಮೂರ್ತಿ ಪರಮೇಶ್ವರನು,

'ಘನ ಸತ್ಯವೇ ಜೀವ ಎಂದಿದ್ದ ನಿನ್ನ ಚಂಡಾಲಸೇವೆ ಗುರುಸೇವೆ. ನೀನು ಹೊತ್ತ ಹೊಲೆವೇಷ ಪಾವನ ಪುಣ್ಯವೇಷ. ಸುಡುಗಾಡನ್ನು ಕಾದಿದ್ದು ಯಜ್ಞರಕ್ಷೆ. ಪ್ರತಿದಿನ ಊಟ ಮಾಡಿದ ಶವದ ಶಿರದಕ್ಕಿ ಚಂದ್ರಾಯಣ ವ್ರತ. ಪುತ್ರನ ಸಾವು ಜನನ ಮರಣಗಳ ಅಳಿವು. ಪತ್ನಿಯನ್ನು ವಧಿಸಿದ್ದು ಮಾಯೆಯ ಕೊಲೆ. ಹೀಗಾಗಿ ಅಂಜಬೇಡ. ಏಳು ಭೂರಮಣ ಎಂದು ಆಶೀರ್ವಾದ ಮಾಡಿ ರಾಜನ ಕಣ್ಣೀರನ್ನು ಒರೆಸಿ ಸಂತೈಸಿದನು. ಹಣೆಗೆ ವಿಭೂತಿಯನ್ನು ಇಟ್ಟು ಅಪ್ಪಿಕೊಂಡನು. ಕೌಶಿಕನನ್ನು ಕರೆದು ಹೇಳಿದನು, .

'ಎಲೆ ಮನಿಪ, ಸುಕುಮಾರನ ತೋಳನ್ನು ಹಿಡಿದೆತ್ತಿಕೊಂಡು ಬಾ.'

ಮುನಿಯು ವಿಷವೇರಿಸತ್ತ ಅರಸುಪುತ್ರನನ್ನು 'ಏಳೇಳು ಲೋಹಿತಾಶ್ವ' ಎಂದು ಏಳಿಸಿದಾಗ ಆಗ ಲೋಹಿತಾಶ್ವನು ರಾಹುವಿನ ಮುಖದಿಂದ ಹೊರಹೊಮ್ಮುವ ಶಶಿಬಿಂಬದಂತೆ ಬೆಳಗಿ ತೊಳಗುತ್ತ – ನಿದ್ರೆ ತಿಳಿದೇಳುವಂತೆ ಎದ್ದನು.

ಅವನು 'ವಿರೂಪಾಕ್ಷ ಶರಣು' ಎಂದು ಹೇಳುತ್ತ ಎದ್ದು, ತಾಯಿಯನ್ನು ಕಂಡು ಮೇರೆ ಮೀರಿದ ಅಕ್ಕರೆಯಲ್ಲಿ ತಬ್ಬಿಕೊಂಡನು. ಹರುಷದಿಂದ ಬಂದು ವಿಶ್ವಪತಿಯ ಪಾದ ಕಮಲಗಳಿಗೆ ನಮಸ್ಕರಿಸಿದನು.

**ಅತಿಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನುನ್ನತಯತಿವರನು**

ಸತ್ಯಸಂಧ ಕುಟುಂಬವನ್ನು ಕಂಡು ಹರ್ಷಗೊಂಡ ಪಾರ್ವತಿಪತಿಯು ಹರಿಶ್ಚಂದ್ರನನ್ನು ತಲೆದಡವಿ ಸಂತೈಸುತ್ತ,

'ರಾಜೇಂದ್ರನೇ, ಅತಿಹುಸಿಯುವ ಯತಿ ಹೊಲೆಯ. ಹುಸಿಯದಿರುವ ಹೊಲೆಯ ಶ್ರೇಷ್ಠಯತಿ. ಹುಸಿದು ಮಾಡುವ ನೂರಾರು ಯಜ್ಞಗಳು ಪಂಚಪಾತಕಗಳು. ಸತ್ಯದಿಂದ ಕೂಡಿರುವುದೇ ಲಿಂಗಾರ್ಚನೆ. ಇದೇ ಶ್ರುತಿಗಳ ಸಾರ. ಇದೇ ನನ್ನ ಆಜ್ಞೆ, ನಿನ್ನಂತೆ ಸತ್ಯವಂತರು ಈ ಇಳೆಯಲ್ಲಿ ಯಾರಿರುವರು ಹೇಳು?' ಎಂದು ಹೇಳಿ, ಕೌಶಿಕ ಮುನಿಯ ಕಡೆ ತಿರುಗಿ,

'ವಿಶ್ವಾಮಿತ್ರಮುನಿಯೇ, ರಾಜನು ಸತ್ಯವಾಗಿ ನಡೆದರೆ, ಅವನಲ್ಲಿ ಅನೃತವು ಇಲ್ಲವೆಂದು ಸ್ಥಿರವಾದರೆ, ನಿನ್ನ ಪ್ರತಿಜ್ಞೆಯಂತೆ ಅವನನ್ನು ಮೆಚ್ಚಿ ಏನನ್ನು ಧಾರೆಯೆರೆದು ಕೊಡುವೆ ಎಂದು ಹೇಳಿದ್ದೆಯೊ ಅದನ್ನು ಬೇಗನೆ ಕೊಡು' ಎಂದು ನುಡಿದನು. ವಿಶ್ವಾಮಿತ್ರನು,

'ನಾನು ನೂರೈವತ್ತು ಕೋಟಿ ವರ್ಷ ನಿಷ್ಠೆಯಿಂದ ತಪವನ್ನು ಆಚರಿಸಿರುವೆನು. ಆ ತಪಸ್ಸಿನ ಫಲದಲ್ಲಿ ಅರ್ಧವನ್ನು ನೀಡುವೆನು ಎಂದು ಹೇಳಿದ್ದೆನು. ನಾನು ಕಡು ಮುಳಿದು ಕಾಡಿ ನೋಡಿದೆನು. ಮೆಚ್ಚಿದೆನು. ನನ್ನ ತಪಸ್ಸಿನ ಅರ್ಧಫಲವನ್ನು ನೀಡುವೆನು ಸ್ವೀಕರಿಸು' ಎಂದು ಹೇಳಿ ಆ ಫಲವನ್ನು ಧಾರೆಯೆರೆದು ಕೊಟ್ಟನು.

ಶಿವನ ಸಮಕ್ಷಮದಲ್ಲಿ ಕೌಶಿಕ ಮುನಿಯು ಹರಿಶ್ಚಂದ್ರನಿಗೆ,

'ಸತ್ಯವ್ರತನೇ, ರಾಜ್ಯದ ಒಡೆತನದ ಪಟ್ಟವನ್ನು ಅಯೋಧ್ಯಾಪುರದಲ್ಲಿ ನೆರವೇರಿಸುವೆನು ರಥವೇರು' ಎಂದು ಹೇಳಿದನು. ಆ ಮಾತು ಕೇಳಿ ಹರಿಶ್ಚಂದ್ರನು ವಿನಮ್ರವಾಗಿ ವಿನಂತಿಸಿದನು,

'ಮುನಿವರ್ಯನೇ, ನಾನು ನನ್ನ ಒಡೆಯನಿಗೆ ನನ್ನ ಮುಂದಿನ ಜೀವನವನ್ನು ಮಾರಿಕೊಂಡಿರುವೆನು. ನಾನು ತಮ್ಮೊಡನೆ ಬರಬಾರದು. ನಿಮ್ಮ ಪಾದಗಳಿಗೆ ಸಮರ್ಪಿಸಿ ದಾನವಾಗಿ ನೀಡಿದ ವಸುಮತಿಯ ಕಡೆ ನಾನು ಅಡಿಯಿಡುವವನಲ್ಲ. ನನಗೆ ಈ ಆಜ್ಞೆ ಮಾಡಬೇಡಿ.'

'ರಾಜೇಂದ್ರನೇ, ನಾನೆಲ್ಲಿ? ರಾಜ್ಯವೆಲ್ಲಿ? ನನಗೆ ರಾಜ್ಯವೇಕೆ? ನಿನ್ನ ಸತ್ಯನಿಷ್ಠೆಯನ್ನು ಪರೀಕ್ಷಿಸಲು ನಿನ್ನಲ್ಲಿರುವ ಎಲ್ಲವನ್ನೂ ತೆಗೆದುಕೊಂಡೆ. ಕಾಡಿನೋಡಿದೆ ಅಷ್ಟೆ. ರಾಜ್ಯ ಸರ್ವಸ್ವವೂ ನಿನ್ನದು. ಯಮನನ್ನು ಕರೆದು ವೀರಬಾಹುಕನನ್ನಾಗಿಸಿದೆ. ಕೇಳಿದ ಧನವನ್ನು ಕೊಟ್ಟು ನಿನಗಾಗುವ ಅನರ್ಥವನ್ನು ತಪ್ಪಿಸಿ ತಡೆಯೆಂದು ಕಳುಹಿಸಿದೆ. ಇದರಲ್ಲಿ ಕೃತಕವೇನೂ ಇಲ್ಲ.'

ಎನ್ನುತ್ತ ವಿಶ್ವಾಮಿತ್ರನು ರಾಜನಿಗೆ ನಂಬುಗೆಯನ್ನುಂಟು ಮಾಡಿದನು. ಆಗ ವಸಿಷ್ಠ ಮುನಿಯು,

'ಹರಿಶ್ಚಂದ್ರನೇ, ನಾನು ದೇವೇಂದ್ರನ ಸಭೆಯಲ್ಲಿ ಹರಿಶ್ಚಂದ್ರನ ನುಡಿಯಲ್ಲಿ ಹುಸಿಯನ್ನು ಕಂಡರೆ–ನಾನು ಮುನಿತನವನ್ನು ಬಿಟ್ಟು, ನರಕಪಾಲವನ್ನು ಹಿಡಿದು ಮದ್ಯ ಸೇವಿಸುತ್ತ ದಕ್ಷಿಣ ಮುಖವಾಗಿ ಹೋಗುವೆನು ಎಂದು ಪ್ರತಿಜ್ಞೆ ಮಾಡಿದ್ದೆನು. ನೀನು ನನ್ನ ಭಾಷೆಯನ್ನು ನಡೆಸಿ ರಕ್ಷಿಸಿದೆ. ಸತ್ಯವನ್ನು ಮೆರೆದೆ' ಎಂದು ಸಂತೋಷದಿಂದ ರಾಜನನ್ನು ಅಪ್ಪಿಕೊಂಡನು. ಕರುಣಾಮೂರ್ತಿ ಪರಮೇಶ್ವರ ಹರಿಶ್ಚಂದ್ರನಕಡೆ ದೃಷ್ಟಿಹರಿಸಿ ನುಡಿದನು.

'ನೀನು ಬೇಕಾದ ವರನ್ನು ಬೇಡು.'

'ಪ್ರಭುವೇ, ನಿನ್ನ ಈ ಪವಿತ್ರ ಕಾಶಿಕ್ಷೇತ್ರದಲ್ಲಿ ನನ್ನ ಕೀರ್ತಿ ಸ್ಥಿರವಾಗಿರುವಂತೆ ಅನುಗ್ರಹಿಸು.'

'ತಥಾಸ್ತು' ಎಂದು ಹೇಳಿ ರಾಜಹರಿಶ್ಚಂದ್ರನನ್ನು ಅಪ್ಪಿಕೊಂಡು ಮೈದಡವಿದನು. ಹರಸಿದನು.

ಕೌಶಿಕಮುನಿಯು ಹರಿಶ್ಚಂದ್ರನನ್ನು ನೋಡುತ್ತ ಹೇಳಿದನು.

'ರಾಜನ್ ದಾರಿಯಲ್ಲಿ ದಾವಾಗ್ನಿಯಾಗಿ ಕಾಡಿದ 'ಅಗ್ನಿ'ಯನ್ನು ವಿಪ್ರವೇಷದಿಂದ ನಿನ್ನಲ್ಲಿಗೆ ಕಳುಹಿಸಿದೆನು. ನಿನ್ನ ರಾಣಿ ಮತ್ತು ಮಗನನ್ನು ಕೊಂಡುಕೊಳ್ಳಲು ಹೇಳಿದೆನು. ಅರಣ್ಯದಲ್ಲಿ ಸರ್ಪವನ್ನು ಸೃಷ್ಟಿಸಿ ನಿನ್ನ ಮಗನನ್ನು ಕೊಂದು, ಕಾಶಿರಾಜನ ಪುತ್ರನನ್ನು ಚೋರರು ಕದ್ದು ಆರೋಪವು ನಿನ್ನ ಸತಿಯ ಮೇಲೆ ಬರುವಂತೆ ಮಾಡಿದೆನು. ನಿನ್ನನ್ನು ಅತಿಯಾಗಿ ಬಳಲಿಸಿದ ಅಪರಾಧಿ ನಾನು.'

'ಮುನಿಶ್ರೇಷ್ಠನೇ, ಎರಡನೆಯ ಶಿವನಂತಿರುವ ನೀನು ಮುನಿದೆಯಾದ ಕಾರಣ, ನಾನು ಪರುಷದ ಸ್ಪರ್ಶದಿಂದ ಲೋಹಪವಿತ್ರವಾದಂತೆ– ಪವಿತ್ರನಾದೆನು. ರವಿಕುಲ ಶುದ್ಧವಾಯಿತು. ಜಗತ್ತಿನಲ್ಲಿ ಕೀರ್ತಿ ಹಬ್ಬಿ, ಬ್ರಹ್ಮ ವಿಷ್ಣುಗಳೊಡನೆ ಪರಮೇಶ್ವರನನ್ನು ಕಾಣುವಂತಾಯಿತು. ತಮ್ಮಿಂದ ನನಗೆ ಕೈವಲ್ಯ ಪ್ರಾಪ್ತಿಯಾಯಿತು' ಎಂದು ಕೈ ಮುಗಿದನು.

'ಹರಿ ಬ್ರಹ್ಮಾದಿ ದೇವತೆಗಳು ಮನು ಮುನಿಗಳು ಕೂಡಿಕೊಂಡು ಕ್ಷಿಪ್ರವಾಗಿ ಹರಿಶ್ಚಂದ್ರ ಮಹಾರಾಜನನ್ನು ಅಯೋಧ್ಯಾಪುರ ಪ್ರವೇಶ ಮಾಡಿಸಿ ಬನ್ನಿ' ಎಂದು ಹೇಳಿ ಪಂಪಾವಿರೂಪಾಕ್ಷ ಲಿಂಗಪ್ರಭುವು ಕೈಲಾಸದ ಕಡೆಗೆ ನಡೆದನು.

## ಸಿಂಹಾಸನಾರೂಢನಾದ ಹರಿಶ್ಚಂದ್ರ

ಹರಿಶ್ಚಂದ್ರ ಮಹಾರಾಜನು ಪತ್ನಿ ಪುತ್ರ ಸಹಿತ, ಮಂತ್ರಿ ಸತ್ಯಕೀರ್ತಿಯೊಡನೆ ರಥವೇರಿ ಅಯೋಧ್ಯಾಪುರದ ಕಡೆಗೆ ಹೊರಟನು. ಅವನೊಡನೆ ಹರಿಬ್ರಹ್ಮಾದಿ ದೇವತೆಗಳು ಮುನಿಗಳು ಹೊರಟರು.

ಭೂಪತಿ ಹರಿಶ್ಚಂದ್ರನು ಬರುತ್ತಿರುವುದನ್ನು ಕೇಳಿ ಅಯೋಧ್ಯಾ ನಗರದ ಪುರಜನ, ಪರಿಜನರ ಆನಂದಕ್ಕೆ ಮೇರೆ ಇಲ್ಲವಾಯಿತು. ಚತುರಂಗಬಲವು ಸಂಭ್ರಮದಿಂದ ಹೋಗಿ ವೈಭವದಿಂದ ರಾಜನನ್ನು ಕರೆತಂದಿತು.

ಶಶಿಯಬರವನ್ನು ಕಂಡು ಸಂತೋಷಗೊಳ್ಳುವ ಸಮುದ್ರದಂತೆ, ಸಂತಸದಿಂದ ಕಳಸ ಕನ್ನಡಿ ಹಿಡಿದ ಸತಿಯರು ಎರಡು ಪಕ್ಕಗಳಲ್ಲಿ ನಿಂತು ಸ್ವಾಗತಿಸಿದರು. ಅಯೋಧ್ಯಾನಗರದ ಜನ ಉತ್ಸಾಹಗೊಂಡು, ಪ್ರೀತಿ ಪೂರ್ವಕವಾಗಿ ಆದರದಿಂದ ಬರಮಾಡಿಕೊಂಡರು.

ಅನುನಯದಿಂದ ಸೂರ್ಯನು ಕಮಲವನ್ನು ಪ್ರವೇಶಿಸುವಂತೆ, ವಸಂತನು ವನವನ್ನು ಪ್ರವೇಶಿಸುವಂತೆ ರಾಜ ಹರಿಶ್ಚಂದ್ರನು ಅಯೋಧ್ಯಾಪುರವನ್ನು ಪ್ರವೇಶಿಸಿದನು. 'ಜಯ ಜಯ!' ಎಂದು ಹಾಡುತ್ತ ಹರಸುತ್ತ ಇಕ್ಕೆಲದಲ್ಲಿ ನಿಂತ ಪುರಜನ, ಪರಿಜನರನ್ನು ಕಂಡು ರಾಜನು ಹರ್ಷಗೊಂಡನು. ಅವರತ್ತ ಕೈಬೀಸಿ ನಲಿದನು. ಪರಿಪರಿಯ ಸ್ವಾಗತ ತೋರಣಗಳನ್ನು ಕಂಡು ಸಂತೋಷ ಚಿತ್ತನಾದನು. ಅರಮನೆಯಕಡೆ ನಡೆದನು.

**ಜನಪತಿಯ ಕೈವಿಡಿದು ಮನೆವೊಕ್ಕನತಿಮುದದಿ-ವಿಶ್ವಾಮಿತ್ರ ಮುನಿನಾಥನು**

ಲಲನೆಯರ ಮಂಗಳಾರತಿಗೆ, ಬ್ರಾಹ್ಮಣರು ನೀಡುವ ಮಂತ್ರಾಕ್ಷತೆಗೆ, ಕವಿಗಳ ಆಶೀರ್ವಾದ ನುಡಿಗೆ, ಪುಣ್ಯಪಾಠಕರ ಹೊಗಳುವಿಕೆಗೆ, ಗಾಯಕರ ಗೀತಕ್ಕೆ, ಅಡಿಗಡಿಗೆ ದನಿಗೂಡುವ ಶುಭವಾದ್ಯಕ್ಕೆ, ಜನದ ಹರಕೆಗೆ ಮನಸ್ಸುಕೊಡುತ್ತ ಭೂಪಾಲ ಅರಮನೆಯನ್ನು ಪ್ರವೇಶಿಸಿದನು.

ಮುನಿರಾಜಾಧಿರಾಜನು, ಮುನಿಗಳಾದಿತ್ಯನು, ಮುನಿಸ್ತುತ್ಯನು ಆದ ವಿಶ್ವಾಮಿತ್ರಮುನಿನಾಥನು ಜನಪತಿ ಹರಿಶ್ಚಂದ್ರನ ಕೈಹಿಡಿದು ಸಂತೋಷದಿಂದ ಅರಮನೆಯನ್ನು ಪ್ರವೇಶಿಸಿದನು. ರಾಜನನ್ನುದ್ದೇಶಿಸಿ,

'ರಾಜೇಂದ್ರನೇ, ನೀನು ಹೋದಾಗ ನನಗೆ ಒಪ್ಪಿಸಿದ್ದ ರೀತಿಯಲ್ಲಿ ಯಾವುದೇ ಕುಂದಾಗದೆ, ನಾಶವಾಗದೆ, ರೂಪುಗೆಡದೆ ವಸ್ತುಗಳು ಹಾಗೆ ಇವೆ ನೋಡು' ಎಂದು ರಾಜ್ಯದ ಸಮಸ್ತ ವಸ್ತು ವೈಭೋಗವನ್ನು ತೋರಿಸುತ್ತ, 'ಅಖಿಲ ಕರಿತುರಗ, ಭಂಡಾರ,

ಉಗ್ರಾಣ, ಸ್ತ್ರೀಸಮೂಹ, ಲೆಕ್ಕದ ಪುಸ್ತಕ, ಮುದ್ರೆಗಳು, ಹಸುವಿನ ಕೊಟ್ಟಿಗೆ, ಪರಿವಾರವಿದೆ ನೋಡಿಕೊಳ್ಳಿ' ಎಂದು ಹೇಳಿ ಒಪ್ಪಿಸಿದನು.

ರಾಜಹರಿಶ್ಚಂದ್ರನು ಕೌಶಿಕಮುನಿಯಿಂದ ಎಲ್ಲವನ್ನೂ ಒಪ್ಪಿಸಿಕೊಂಡನು. ಮುದದಿಂದ ನಡೆದು ಮಹಾಸಿಂಹಾಸನವನ್ನು ಏರಿ ಕುಳಿತನು. ದಾನ ಧರ್ಮಗಳನ್ನು ಮಾಡಿದನು. ಜನಗಳಿಗೆ ಕಾಣಿಕೆನೀಡಿ ಅಭಯವನ್ನಿತ್ತನು. ವಿಷ್ಣು ಬ್ರಹ್ಮಾದಿ ದೇವತೆಗಳಿಗೆ ನಮಿಸಿ ಅವರನ್ನು ತಮ್ಮಲೋಕಗಳಿಗೆ ಬೀಳ್ಕೊಟ್ಟನು.

'ತಾವು ನನ್ನನ್ನು ಪಾಲಿಸಿ, ರಕ್ಷಿಸಿರುವಿರಿ' ಎಂದು ಹೇಳುತ್ತ ರಾಜನು ಕೌಶಿಕ ಮುನಿಗಳಿಗೆ ನಮಸ್ಕರಿಸಿದನು. ಎಲ್ಲ ಮುನಿಗಳಿಗೆ ವಂದಿಸಿ ಆಶೀರ್ವಾದ ಪಡೆದನು. ಅವರೆಲ್ಲರನ್ನೂ ಗೌರವಪೂರ್ವಕವಾಗಿ ಕಳುಹಿಸಿಕೊಟ್ಟನು.

ಸಭೆಗೆ ಬಂದಿದ್ದ ಚೋಳ, ಮಾಳವ, ಮಗಧ, ಕಳಿಂಗ, ತುಳುವ, ಸೌರಾಷ್ಟ್ರಕ, ಕಾಶ್ಮೀರ ಮುಂತಾದ ರಾಜರನ್ನು ಸನ್ಮಾನಿಸಿ ಉಡುಗೊರೆಗಳನ್ನು ನೀಡಿ ಕಳುಹಿಸಿಕೊಟ್ಟನು.

ಹರ ವಿಷ್ಣು ಬ್ರಹ್ಮಾದಿ ದೇವತೆಗಳ ಸಭೆಯೊಳಗೆ, ವರಮುನಿಗಳ, ರಾಜರುಗಳ ಸಭೆಯೊಳಗೆ ರಾಜ ಸತ್ಯಹರಿಶ್ಚಂದ್ರನ ಕಥನ ಮತ್ತು ಮಾತು ನಡೆದಿತ್ತು.



## ಅನುಬಂಧ–೧

## ಕಠಿಣ ಶಬ್ದಾರ್ಥ ಕೋಶ

### ಅ

ಅಂದಣ – ಮೇನೆ; ಪಲ್ಲಕ್ಕಿ.

ಅಟ್ಟಣೆ – ಕೋಟೆಯ ಮೇಲೆ ಕಟ್ಟಿರುವ ಕೊಠಡಿ; ಕೊತ್ತಳ, ಬುರುಜು.

ಅಣಿಮಾ – ಅಣಿಮೆ; ಅತ್ಯಂತ ಸೂಕ್ಷ್ಮವಾದ ರೂಪವನ್ನು ಹೊಂದಬಲ್ಲ ಶಕ್ತಿ; ಅಷ್ಟಸಿದ್ಧಿಗಳಲ್ಲಿ ಒಂದು.

ಅನಿಮಿಷ – ಕಣ್ಣು ಮಿಟುಕಿಸದ; ರೆಪ್ಪೆ ಹೊಡೆಯದ.

ಅರ್ಬುದ – ಒಂದು ಸಂಖ್ಯೆ ; ಹತ್ತು ಕೋಟಿ.

ಅವಧಾರು – ೧. ಕೇಳು, ೨. ದೇವತೆ, ಗುರು, ರಾಜ, ಹಿರಿಯರು ಮೊದಲಾದವರ ಗಮನವನ್ನು ಸೆಳೆಯಲು ಬಳಸುವ ಮಾತು.

ಅಳ್ಳೆ – ಹೊಟ್ಟೆಯ ಒಂದು ಪಕ್ಕ; ಪಕ್ಕೆ.

ಅಕ್ಷೋಹಿಣಿ – ೨೧,೮೭೦ ಆನೆ, ಅಷ್ಟೇರಥ, ೬೫,೬೧೦ ಕುದುರೆ ಮತ್ತು ೧,೦೯,೩೫೦ ಕಾಲಾಳುಗಳಿರುವ ಸೈನ್ಯ.

### ಎ

ಎಕ್ಕವಡ – ಹಕ್ಕಿಗಳನ್ನು ಹಿಡಿಯುವ ಬಟ್ಟೆ.

ಎಯ್ಯೆಚ್ಚ – ಒಂದು ಜಾತಿಯ ಪ್ರಾಣಿ.

### ಕ

ಕಂಕರಿಗೋಲು– (ಅಸ್ಪೃಶ್ಯತೆಯ ಸಂಕೇತವಾಗಿ ಚಂಡಾಲನು ಕೈಯಲ್ಲಿ ಹಿಡಿದುಕೊಳ್ಳುವ) ದೊಣ್ಣೆ, ಕೋಲು.

ಕರವತಿಗೆ – ಕೈ ಗರಗಸ

ಕಿಂ ಪುರುಷ – ಕುದುರೆಯ ತಲೆ ಮನುಷ್ಯನ ಶರೀರ ಅಥವಾ ಮನುಷ್ಯನ ಮುಖ ಕುದುರೆಯ ಶರೀರವುಳ್ಳ ಒಂದು ವಿಧವಾದ ದೇವತೆ.

ಕಿಗ್ಗಣ್ಣು – ಕೆಳ ಮೊಗವಾಗಿ ನೋಡುವ ಕಣ್ಣು; ಕೆಳಗಣ್ಣು.

ಕಿಗ್ಗಾಳಿ – ಬೇಟೆಗೆ ಗುರಿಯಾದ ಪ್ರಾಣಿಯ ಕಡೆಯಿಂದ ಬೇಟೆಯಾಡುವ ಪ್ರಾಣಿಯ ಕಡೆಗೆ ಬೀಸುವ ಗಾಳಿ.

ಕಿನ್ನರ – ಕುದುರೆಯ ಮುಖ ಮತ್ತು ಮನುಷ್ಯನ ಶರೀರದ ದೇವತೆಗಳ ವರ್ಗ; ಇವರು ಕುಬೇರನ ಪ್ರಜೆಗಳೂ, ಕಶ್ಯಪನ ಮಕ್ಕಳೆಂದು ಕತೆ; ಅಪ್ಸರ ವರ್ಗ.

ಕುಡುದಾಡೆ – ಕೊಂಕಿದ ಕೋರೆಹಲ್ಲು.
ಕೂಳಿ – ಮೀನು ಹಿಡಿಯುವ ಬುಟ್ಟಿ.
ಕೊಂಚೆ – ಕ್ರೌಂಚ ಪಕ್ಷಿ.
ಕೊತ್ತಳ – ಕೋಟೆಯ ಬುರುಜು.

## ಖ

ಖಗ – ೧. ಆಕಾಶದಲ್ಲಿ ಸಂಚರಿಸುವಂಥದು. ೨. ಹಕ್ಕಿ; ಪಕ್ಷಿ.
ಖಡ್ಗಿ – ಗೇಂಡಾಮೃಗ
ಖೇಚರ – ಆಕಾಶದಲ್ಲಿ ಅಲೆಯುವ ಗಂಧರ್ವರು

## ಗ

ಗಳಿಗೆ – ಇಪ್ಪತ್ತನಾಲ್ಕು ನಿಮಿಷಗಳ ಅವಧಿ.
ಗುದಿಗಳು – (ಕಟ್ಟಿದ) ಗೊಂಚಲು.
ಗುಹ್ಯಕರು – ೧. ದೇವತೆಗಳಲ್ಲಿ ಒಂದು ವರ್ಗ ೨. ಕುಬೇರ ೩. ಯಕ್ಷ
ಗೋರಿ – ಬೇಟೆಯಲ್ಲಿ ಜಿಂಕೆಗಳನ್ನು ಮರುಳುಗೊಳಿಸಲು ಬೇಟೆಗಾರರು ಹಾಡುವ ಹಾಡು.
ಗೋರಿಬೇಟೆ– ಮೃಗಗಳನ್ನು ಮರುಳುಗೊಳಿಸಿ ಬಲೆಗೆ ಕೆಡಹುವ–ಒಂದು ಬಗೆಯ ಬೇಟೆ

## ಚ

ಚಕೋರ – ಬೆಳುಂದಿಗಳನ್ನೇ ಸೇವಿಸಿ ಬದುಕುವುದೆಂದು ನಂಬಲಾದ ಒಂದು ಪಕ್ಷಿ; ಜೊನ್ನವಕ್ಕಿ.
ಚಕೋರಿ – ಹೆಣ್ಣು ಚಕೋರ ಪಕ್ಷಿ
ಚಿತ್ರಕ – ಚಿರತೆ, ಹುಲಿ
ಚಿನ್ನ – ಚಿಕ್ಕದಾದ, ಸಣ್ಣದಾದ.

## ಜ

ಜಾವ – ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ; ಏಳೂವರೆಗಳಿಗೆ; ಮೂರುಗಂಟೆ ಕಾಲ.

## ಡ

ಡೆಂಕಣಿ – ಕೋಟೆ ಕಾಳಗದಲ್ಲಿ ಉಪಯೋಗಿಸುತ್ತಿದ್ದ ಯಂತ್ರ; ಕಲ್ಲು ಗುಂಡುಗಳನ್ನು ತೂರುವ ಯಂತ್ರ.

## ತ

ತಿತ್ತಿರಿ – ಊದುವ ಒಂದು ವಾದ್ಯ; ತೂರ್ಯ.

ತೋಹು – ದೀಹದ ನೆರವಿನಿಂದ ಬೇಟೆಯಾಡಲು ವನ್ಯ ಮೃಗಗಳನ್ನು ಆಕರ್ಷಿಸುವ ಸ್ಥಳ – ಬೇಟೆಯಾಡುವ ಸ್ಥಳ.

## ದ

ದೀಹ – ಬೇಟೆಗೆ ಉಪಯೋಗಿಸಲು ಬಳಸಿದ ಪ್ರಾಣಿ; ಸೆಳೆ.

## ಧ

ಧರಾಚರ – ಮನುಷ್ಯರು.

## ನ

ನಿಸ್ಸಾಳ – ಒಂದು ಬಗೆಯ ಚರ್ಮವಾದ್ಯ.

ನೈಋತಿ – ಅಸುರ; ನೈಋತ್ಯ ದಿಕ್ಪಾಲಕ. ಪಶ್ಚಿಮ ಮತ್ತು ದಕ್ಷಿಣಗಳ ನಡುವೆ ಇರುವ ದಿಕ್ಕು.

## ಪ

ಪಡಿಸಣ – ರಾಜರು ಸೇವಿಸುವ ಆಹಾರವನ್ನು ವಿಷ ಮಿಶ್ರಿತವಾಗಿದೆಯೇ ಎಂದು ಪರೀಕ್ಷಿಸುವಿಕೆ.

ಪದ್ಮ – ಒಂದು ಸಂಖ್ಯೆ; ನೂರು ಕೋಟಿ.

ಪಳಹಬೇಟೆ – ಒಂದು ವಿಧವಾದ ಬೇಟೆ.

ಪುಣ್ಯ ಪಾಠಕ– ಶುಭವನ್ನು ಕೋರುವವನು; ಮಂಗಳ ಪಾಠಕ; ವಂದಿ.

## ಬ

ಬಡಬಾಗ್ನಿ – ಸಮುದ್ರದ ಒಳಗಿರುವ ಬೆಂಕಿ; ವಡಬಾಗ್ನಿ

ಬುರುಜು – ಕೋಟೆಯ ಪ್ರಾಕಾರದ ಮೇಲೂ ಗೋಪುರದ ತುದಿಯಲ್ಲೂ ಕಟ್ಟುವ ವರ್ತುಲಾಕಾರದ ಕಟ್ಟಡ; ಗುಮ್ಮಟ.

ಬೆಳ್ಳಾರ – ಪ್ರಾಣಿಪಕ್ಷಿಗಳನ್ನು ಹಿಡಿಯಲು ಬಳಸುವ ಒಂದು ಬಗಯೆ ಬಲೆ.

ಬೊಂಬುಳಿ – ಒಂದು ಬಗೆಯ ಚರ್ಮವಾದ್ಯ.

## ಮ

ಮರೆ – ಒಂದು ಬಗೆಯ ಜಿಂಕೆ.

ಮಧುರಾಪುರ– ಶ್ರೀ ಕೃಷ್ಣನು ಅವತರಿಸಿದ ಸ್ಥಳ.

ಮ್ಲಾನ – ಬಾಡಿದ ; ಮುದುಡಿದ.
ಮೇಗಾಳಿ – ಬೇಟೆಯಾಡುವ ಮೃಗದ ಕಡೆಯಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿ.

**ವ**

ವಿದ್ಯಾಧರ – ದೇವತೆಗಳಲ್ಲಿ ಒಂದು ವರ್ಗ ಮತ್ತು ಆ ವರ್ಗಕ್ಕೆ ಸೇರಿದವರು.
ವಿಷ – ನೀರು; ಜಲ.

**ಶ**

ಶೋಣಿತಪುರ– ಬಾಣಾಸುರನ ಪಟ್ಟಣ.
ಶಿವಘೋ – ಶಿವ, ಶಿವ ಎಂದು ಆರ್ತನಾದ ಮಾಡು; ಮೊರೆಯಿಡು.

**ಸ**

ಸಂಬಳಿ – 'ದಾರಿಬಿಡಿ' ಎಂದು ಎಚ್ಚರಿಕೆಯನ್ನು ನೀಡುವ ಮಾತು.
ಸಂಬಳಿಗೋಲು– (ಹೊಲೆಯನು ತನ್ನ ಬರುವಿಕೆಯನ್ನು ಸೂಚಿಸಿ ಜನರು ಪಕ್ಕಕ್ಕೆ ಸರಿಯುವಂತೆ ಎಚ್ಚರಿಕೆಯನ್ನು ನೀಡಲು ಬಳಸುತ್ತಿದ್ದ) ದೊಣ್ಣೆ; ಕೋಲು.
ಸಿದ್ದಿಗೆ – ಹೆಣಹೊರುವ ಸಾಧನ; ಚಟ್ಟ.
ಸಿದ್ಧರಸ – ಯಾವುದೇ ಲೋಹವನ್ನು ಬಂಗಾರವನ್ನಾಗಿ ಮಾರ್ಪಡಿಸುವುದೆಂದು ನಂಬಲಾದ ಒಂದು ರಸ; ಪಾದರಸ.
ಸುರಗಿ – ಸಣ್ಣ ಕತ್ತಿ; ಚೂರಿ.
ಸೇಸೆ – ಮಂಗಳಾಕ್ಷತೆ, ಮಂತ್ರಾಕ್ಷತೆ

**ಹ**

ಹಡಪಿಗ – ತನ್ನ ಒಡೆಯನಿಗೆ ಅಡಕೆ ಎಲೆಯ ಚೀಲವನ್ನು ಹಿಡಿದು ಸೇವೆ ಮಾಡುವವನು.
ಹರೆ – ಚರ್ಮವಾದ್ಯ; ತಮಟೆ.
ಹೆಗ್ಗಾಳೆ – ಹೆಗ್ಗಹಳೆ; ದೊಡ್ಡದಾದ ಕಹಳೆ.

****

ಅನುಬಂಧ-೨

# ಅಭಿಪ್ರಾಯಗಳು

**ರೋಚಕ ಕಾಂದಬರಿ, ಆಕರ್ಷಕ ನಿರೂಪಣೆ**

ರಾಘವಾಂಕ ಮಹಾಕವಿಯ 'ಹರಿಶ್ಚಂದ್ರ ಚಾರಿತ್ರ' (ಜಿ. ಕೃಷ್ಣಪ್ಪ) ಕಾದಂಬರಿ ತುಂಬ ಚೆನ್ನಾಗಿ ಮೂಡಿ ಬರುತ್ತಿದೆ. 'ಕನ್ನಡ ಎನೆ ಕುಣಿದಾಡುವುದೆನ್ನೆದೆ; ಕನ್ನಡ ಎನೆ ಕಿವಿ ನಿಮಿರುವುದು' ಎಂದರು ರಾಷ್ಟ್ರಕವಿ. ನಮ್ಮ ಕೃಷ್ಣಪ್ಪ ಅವರ ಕಾದಂಬರಿಗಳನ್ನು ಅವರು ಓದಿದ್ರೆ ನೋಡಿದ್ರೆ ಚೆನ್ನಾಗಿರುತ್ತಿತ್ತು ಅನಿಸ್ತದೆ.

**-ಕೆ.ಎಂ. ಮಧ್ವರಾಯ, ಬೆಂಗಳೂರು, ಜೆ. ವೆಂಕಟರಾಮಯ್ಯ, ವೈ.ಜಿ. ನರಸಿಂಹನ್, ಶಿವಮೊಗ್ಗ, ಎಸ್.ಪಿ. ವಿಜಯಲಕ್ಷ್ಮಿ, ಬೆಂಗಳೂರು, ಎಸ್. ಲಕ್ಷ್ಮೀನರಸಿಂಹ, ಚಾಮರಾಜನಗರ, ಡಾ.ಕೆ.ಎಸ್. ಶ್ರೀಕಂಠರಾವ್, ಬೆಂಗಳೂರು**

**ಮತ್ತೆ ಮತ್ತೆ ಮೆಲುಕು ಹಾಕುವಂತಿವೆ**

ಕಾದಂಬರಿಕಾರರು ವರ್ಣಿಸಿದ ಹರಿಶ್ಚಂದ್ರ ಮಹಾರಾಜನ ವ್ಯಕ್ತಿತ್ವ, ಇಂದ್ರರಾಜನ ಸಭೆ, ಮುನಿಗಳ 'ಪಣ'ಗಳ ವರ್ಣನೆ ಒಂದೊಂದೂ ರೋಚಕವಾಗಿ, ಕಲಾತ್ಮಕವಾಗಿ ವರ್ಣಿಸಿದ್ದಾರೆ. ಅವರು ನೀಡಿರುವ ಹೋಲಿಕೆಗಳು ಮತ್ತೆ ಮತ್ತೆ ಮೆಲುಕು ಹಾಕುವಂತಿವೆ.

**-ಎಂ. ಪುಟ್ಟತಾಯಮ್ಮ, ಗುಂಡ್ಲುಪೇಟೆ**

**ಸೊಗಸಾಗಿದೆ**

ಹರಿಶ್ಚಂದ್ರನ ರಾಜ್ಯದ ವೈಭವ, ಹರಿಶ್ಚಂದ್ರ ಮತ್ತು ಚಂದ್ರಮತಿಯರ ಗುಣಗಳ ಕುರಿತಾದ ವಿವರಣೆ ಸೊಗಸಾಗಿದೆ. ಲೇಖಕ ಕೃಷ್ಣಪ್ಪನವರಿಗೂ ಹಾಗೂ ಪ್ರಕಟಿಸುತ್ತಿರುವ 'ಸುಧಾ'ಕ್ಕೂ ವಂದನೆಗಳು.

**-ಸು. ವಿಜಯಲಕ್ಷ್ಮಿ, ಶಿವಮೊಗ್ಗ**

**ಧಾರಾವಾಹಿ ಚೆನ್ನಾಗಿದೆ**

'ಹರಿಶ್ಚಂದ್ರ ಕಾವ್ಯ'ದ ಗದ್ಯರೂಪದ 'ಹರಿಶ್ಚಂದ್ರ ಚಾರಿತ್ರ' ಧಾರವಾಹಿ ಚೆನ್ನಾಗಿ ಬರುತ್ತಿದೆ. ಜಿ.ಕೆ. ಶಿವಣ್ಣ ಅವರ ಚಿತ್ರಗಳೂ ಚೆನ್ನಾಗಿವೆ.

**-ಎಲ್. ಗಿರಿಜಾರಾಜ್, ಬೆಂಗಳೂರು**

**ಅತ್ಯಪೂರ್ವ ಬರಹ**

ರಾಘವಾಂಕನ 'ಹರಿಶ್ಚಂದ್ರ' ಕಾವ್ಯ ಕನ್ನಡ ಕಾವ್ಯಲೋಕದ ಕೆನೆಯ ಕೆನೆ. ವಿಶ್ವಾಮಿತ್ರ ಹಾಗೂ ವಸಿಷ್ಠ ಎಂಬ ಯಮಳ ಶಕ್ತಿಗಳ ಕಡೆಗೋಲಿಗೆ ಸಿಕ್ಕಿಸಿ ಕೇವಲ ಹರಿಶ್ಚಂದ್ರನನ್ನು ಸತ್ಯಹರಿಶ್ಚಂದ್ರನನ್ನಾಗಿಸಿದ ಪವಾಡ ಸದೃಶ ಕಾವ್ಯ ಶಕ್ತಿ ರಾಘವಾಂಕನದು.

ಈ ಕಾವ್ಯದ ಹೃದಯವನ್ನು ತಮ್ಮ ಪ್ರಬುದ್ಧ ಗದ್ಯ ಶೈಲಿಯಲ್ಲಿ ಕೃಷ್ಣಪ್ಪನವರು ಹಿಡಿದುಕೊಟ್ಟಿದ್ದಾರೆ. ಅವರದು ತಪೋಮಯ ಅಧ್ಯಯನ. ಅವರ ಅತ್ಯಪೂರ್ವ ಬರಹವನ್ನು ಧಾರಾವಾಹಿಯಾಗಿ ಪ್ರಕಟಿಸುವುದರ ಮೂಲಕ ಕನ್ನಡವನ್ನು ಶ್ರೀಮಂತಗೊಳಿಸುತ್ತಿರುವ 'ಸುಧಾ' ನಿಜವಾದ ಅರ್ಥದಲ್ಲಿ ಕನ್ನಡಿಗರ ಪಾಲಿಗೆ ಸುಧೆಯೆ ಆಗಿದೆ.

**–ಜ.ಹೊ. ನಾರಾಯಣಸ್ವಾಮಿ, ಹಾಸನ**

**ಪಾಯಸಕ್ಕೆ ಹಾಲು–ಜೇನು**

ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಹಲವು ಸಲ ಓದಿದ್ದೇನೆ. ಆದರೆ ಜಿ.ಕೃಷ್ಣಪ್ಪನವರಲ್ಲಿ ಅದನ್ನೇ ಕೇಳುವುದೆಂದರೆ ಪಾಯಸಕ್ಕೆ ಹಾಲು ಜೇನು ಸೇರಿಸಿದಂತೆ.

**–ನೇ.ಗೋ.ಭ., ಕುಕ್ಕೆ ಸುಬ್ರಹ್ಮಣ್ಯ**

**ರೋಚಕ ಕಥಾನಕ**

'ಹರಿಶ್ಚಂದ್ರ ಚಾರಿತ್ರ' ಧಾರಾವಾಹಿ ಅತ್ಯುತ್ತಮವಾಗಿ ಮೂಡಿ ಬಂತು. ಕಾವ್ಯರೂಪದಲ್ಲಿ ಓದುವ, ಅರ್ಥ ಮಾಡಿಕೊಂಡು ಆನಂದಿಸುವ ಶಕ್ತಿ ಇಲ್ಲದ ನಮ್ಮಂತಹವರಿಗೆ ನಮ್ಮ ಓದಿಗೆ ದಕ್ಕುವಂತೆ ಗದ್ಯಕ್ಕೆ ಇಳಿಸಿ ಈ ಕಥೆಯ ರೋಚಕತೆಯನ್ನು ಸೌಂದರ್ಯವನ್ನೂ ಸವಿಯಲು ಅವಕಾಶ ಮಾಡಿಕೊಟ್ಟ ಲೇಖಕರಿಗೆ, ಅತ್ಯುತ್ತಮ ಚಿತ್ರಗಳಿಂದ ಸೊಗಸಾದ ಅರ್ಥ ಹೊಮ್ಮಿಸಿದ ಕಲಾವಿದ ಜಿ.ಕೆ. ಶಿವಣ್ಣನವರಿಗೂ ನಮ್ಮ ಮೆಚ್ಚಿನ 'ಸುಧಾ' ಪತ್ರಿಕೆಗೂ ಧನ್ಯವಾದ.

**–ನಾ.ಸು. ನಾಗೇಶ, ನಾಗಮಂಗಲ**

**ಸಂಗ್ರಹ ಯೋಗ್ಯ**

ಧಾರಾವಾಹಿ ಮತ್ತೆ ಮತ್ತೆ ಓದಬೇಕೆನಿಸುತ್ತದೆ. ಸಂಗ್ರಹ ಯೋಗ್ಯವೂ ಆಗಿದೆ. ಇನ್ನು ಮುಂದೆಯೂ ಕೂಡ 'ಸುಧಾ'ಳಿಂದ ಇಂತಹ ಕಾದಂಬರಿಗಳನ್ನು ನಿರೀಕ್ಷಿಸಬಹುದೇ?

**–ಸು. ವಿಜಯಲಕ್ಷ್ಮಿ, ಶಿವಮೊಗ್ಗ**

**ಮನಮುಟ್ಟುವಂತಿತ್ತು**

ಈ ಆಧುನಿಕ ಸಮಾಜಕ್ಕೆ ಇಂತಹ ಪೌರಾಣಿಕ ಘಟನೆಗಳನ್ನು ಪರಿಚಯಸಿವುದು– 'ಸತ್ಯ' ಎಂದರೆ ಏನು? ಅದನ್ನು ಹೇಗೆ ನಿರೂಪಿಸುವುದು? ಎನ್ನುವ ಮಾರ್ಗದರ್ಶನವನ್ನು ವಿವರಿಸಿ, ಜನರಿಗೆ ಮನಮುಟ್ಟುವಂತೆ ತಿಳಿಸಿದ್ದಾರೆ ಜಿ. ಕೃಷ್ಣಪ್ಪನವರು.

**– ಎನ್. ಸೂರ್ಯನಾರಾಯಣ, ಬೆಂಗಳೂರು.**

**ರಸವತ್ತಾಗಿತ್ತು**

ಸಾಮಾನ್ಯವಾಗಿ 'ಸತ್ಯ ಹರಿಶ್ಚಂದ್ರ' ಕಥೆಯನ್ನು ಎಲ್ಲರೂ ಓದಿರುತ್ತಾರೆ. ಕೇಳಿರುತ್ತಾರೆ. ಮತ್ತೊಮ್ಮೆ ಲೇಖಕರು 'ಹರಿಶ್ಚಂದ್ರ ಚಾರಿತ್ರ'ವನ್ನು ಬಹಳ ರಸವತ್ತಾಗಿ ಉಣಬಡಿಸಿದರು.

**– ಎನ್. ವಿಜಯಕುಮಾರಿ, ಬೆಂಗಳೂರು**

**ಷಡಕ್ಷರಿ ಕಾವ್ಯ ಕಾದಂಬರಿಯಾಗಲಿ**

ಮೂಲ ಕಾವ್ಯಕ್ಕೆ ಸರಿಸಮನಾಗಿ ಭಾವ ಸಹಿತ, ಅರ್ಥ ಸಹಿತ, ಸಂದರ್ಭ ಸಹಿತ ಸರಳ ಗನ್ನಡದಲ್ಲಿ ಮೂಡಿಬಂದಿತು. ಪ್ರೌಢವಾದ ಕಾವ್ಯವು ಸರಳಗನ್ನಡದಲ್ಲಿ ರಸಾಸ್ವಾದವನ್ನುಂಟು ಮಾಡಿತು. ಶಿವಣ್ಣ ಅವರ ಕುಂಚ ಪೂರಕವಾಗಿತ್ತು. ಇದೇ ರೀತಿ ಮುಂದೆ ಮಹಾಕವಿ ಷಡಕ್ಷರಿಯ ಶಬರ ಶಂಕರ ವಿಲಾಸ, ರಾಜಶೇಖರ ವಿಳಾಸವನ್ನು ಧಾರಾವಾಹಿಯಾಗಿ ನೀಡಬೇಕೆಂದು ಮನವಿ.

**–ರುದ್ರೇಶ್ ಬಿ. ಅದರಂಗಿ, ಬೆಂಗಳೂರು.**

**ರಾಜಕುಮಾರ್ ಅಭಿನಯ ನೆನಪಾಯಿತು.**

ಧಾರಾವಾಹಿಯಲ್ಲಿ ಕನ್ನಡ ಸಿರಿನುಡಿಯ ಪದ ಜೋಡಣೆ, ಕಣ್ಣಿಗೆ ಕಟ್ಟುವ ಸನ್ನಿವೇಶಗಳ ವಿವರಣೆ, ಅರ್ಥಭರಿತವಾದ ಸಂಭಾಷಣೆಗಳು ಓದುಗರ ಮನಸೂರೆ ಗೊಳ್ಳುತ್ತದೆ. ಜೊತೆಗೆ ಕನ್ನಡದ ಮೇರುನಟ ಡಾ. ರಾಜ್‌ಕುಮಾರರ ಅಭಿನಯದ ಸತ್ಯಹರಿಶ್ಚಂದ್ರ ಚಿತ್ರದ ನೆನಪಾಗುತ್ತಿತ್ತು.

**– ವಿಜಯಲಕ್ಷ್ಮೀ, ಉಪ್ಪಾರಹಳ್ಳಿ**

**ಹೊಸತನ**

ನಾಟಕದ ಶೈಲಿಯ ಚಿತ್ರಕಥೆ, ಸಂಭಾಷಣೆಗಳನ್ನು ಒಳಗೊಂಡು ಹೊಸತನವನ್ನು ಬಿಂಬಿಸಿತ್ತು. ನಮ್ಮ ಪೌರಾಣಿಕ ಕಥಾನಕಗಳು ಸಾರ್ವಕಾಲಿಕ ಎಂಬುದನ್ನು ಸಾಬೀತುಪಡಿಸಿ ಓದುಗರ ಪ್ರಶಂಸೆಗೆ ಪಾತ್ರವಾದ ಧಾರವಾಹಿಯಾಗಿದೆ.

**–ನೆ.ಲ. ರಾಮಮೂರ್ತಿ, ಬೆಂಗಳೂರು.**

**ನೆನಪಿನಲ್ಲಿ ಉಳಿಯುವಂಥದ್ದು**

ಹರಿಶ್ಚಂದ್ರ ಚಾರಿತ್ರ ನಮ್ಮ ಬುದ್ಧಿಭಾವಗಳನ್ನು ತೀಡಿದ ಅನನ್ಯ ಕೃತಿ. ಜಿ. ಕೃಷ್ಣಪ್ಪನವರು ವಿದ್ವತ್ಪೂರ್ಣವಾಗಿ ಕಾವ್ಯದ ರಸವನ್ನು ಗದ್ಯದಲ್ಲಿ ಮೂಡಿಸಿದ್ದಾರೆ. ಭಾವಪರವಶವಾಗುವಂತೆ ಮಾಡಿದ ಈ ಆಧುನಿಕ ಗದ್ಯವಾಹಿನಿ ಬಹುಕಾಲ ನೆನಪಿನಲ್ಲಿ ಉಳಿಯುತ್ತದೆ.

ಪಠ್ಯಕ್ಕಾಗಿ ಈ ಕಾವ್ಯವನ್ನು ಓದಿದ್ದು ವೈದ್ಯರ ಒತ್ತಾಯದಿಂದ ಪಥ್ಯಕ್ಕಾಗಿ ಜೇನು ಸೇವಿಸಿದಂತೆ ಆಗಿತ್ತು. ಈಗ ಆ ಜೇನಿನ ನಿಜವಾದ ಸವಿಭಾಸವಾಯಿತು. ಧಾರಾವಾಹಿಯ ಜೊತೆ ಅರಳಿದ ಚಿತ್ರಗಳು ಜೇನಿಗೆ ಹಾಲು ಬೆರೆಸಿದಂತಿತ್ತು.

**–ರಾಜಕುಮಾರ ಸಂಕನಾಳ, ಸಂಕೇಶ್ವರ**

**ಸಿನಿಮಾ ನೋಡಿದಷ್ಟೇ ಖುಷಿ**

ಒಂಬತ್ತು ಕಂತುಗಳ ಧಾರಾವಾಹಿ ನಮ್ಮನ್ನು ೭೦ರ ದಶಕದಲ್ಲಿ ಬಿಡುಗಡೆಯಾದ ಸತ್ಯಹರಿಶ್ಚಂದ್ರ ಸಿನಿಮಾ ನೋಡಿದಷ್ಟೇ ಖುಷಿಯಾಯಿತು. ಒಂದೊಂದು ಕಂತಿನಲ್ಲಿನ ಕಥೆಯ ಸಂಭಾಷಣೆ, ಚಿತ್ರ ಅತ್ಯಂತ ಸೊಗಸಾಗಿತ್ತು.

**–ಸಿಹಿಮೊಗೆ ರಮೇಶ್, ಮೈಸೂರು.**

**ರಸದೌತಣ**

ಹರಿಶ್ಚಂದ್ರ ಚಾರಿತ್ರ ಕಾದಂಬರಿ ಬಹಳ ಬೇಗ ಮುಗಿಯಿತು ಎಂದು ಬೇಸರವಾಯಿತು. ಒಂಬತ್ತು ವಾರಗಳ ಕಾಲ ಸುಧಾ ರಸದೌತಣ ಉಣಬಡಿಸಿತ್ತು.

**– ಎಸ್. ಲಕ್ಷ್ಮೀನರಸಿಂಹ, ಚಾಮರಾಜನಗರ**

**ಸತ್ಯವೇ ದೇವರು**

ಸತ್ಯವೇ ದೇವರು ಎಂದು ನಂಬಿದ ಮಹಾಪುರುಷನ ಕುರಿತಾದ ಕಥೆ ನಿಜಕ್ಕೂ ಉತ್ತಮವಾಗಿತ್ತು. ಉತ್ತಮ ಭಾಷೆ, ಆಕರ್ಷಕ ಶೈಲಿಯ ಕಥೆ ಒಂಬತ್ತು ವಾರ ಸೊಗಸಾಗಿ ಮೂಡಿಬಂತು.

**– ಎಸ್.ಜಿ. ಕರನಂದಿ, ಹುನಗುಂದ**

**ಮರುಕಳಿಸಿದ ನೆನಪು**

ಕಾದಂಬರಿ ಬಹಳ ಚೆನ್ನಾಗಿ ಮೂಡಿಬಂದಿದೆ. ಸುಮಾರು ೪೦ ವರ್ಷಗಳ ಹಿಂದೆ ಕಾಲೇಜಿನಲ್ಲಿ ಈ ಕಾವ್ಯದ ಉಪನ್ಯಾಸವನ್ನು ಪ್ರಾಧ್ಯಾಪಕರ ಬಾಯಿಯಿಂದ ಕೇಳುತ್ತಿದ್ದ ನೆನಪು ಮರುಕಳಿಸಿತು.

**–ಪಿ. ಎ. ಸುಧೀಂದ್ರ, ಬೆಂಗಳೂರು**

ಅಭಿಪ್ರಾಯಗಳು

**ಆಕರ್ಷಕ ಸ್ವರೂಪ**

ರಾಘವಾಂಕನ ಕಾವ್ಯ ಕೃಷ್ಣಪ್ಪ ಅವರ ಬರಹದ ಮೂಲಕ ಆಕರ್ಷಕ ಸ್ವರೂಪ ಪಡೆದಿದೆ. ವರ್ಣನೆ ಮನಮುಟ್ಟುವಂತಿತ್ತು. ಕಲ್ಪನೆಯ ಚಿತ್ರ ಡಾ. ರಾಜಕುಮಾರ್ ಅವರ 'ಸತ್ಯ ಹರಿಶ್ಚಂದ್ರ' ಚಿತ್ರವನ್ನು ನೆನಪಿಸಿತು. ಧಾರಾವಾಹಿ ಮುಗಿದದ್ದೇ ತಿಳಿಯಲಿಲ್ಲ. ಲೇಖಕರಿಗೆ, ಚಿತ್ರಕಲಾವಿದರಿಗೆ, ಸುಧಾ ವಾರಪತ್ರಿಕೆಗೆ ಧನ್ಯವಾದಗಳು.

**– ಎಂ. ಮೃತ್ಯುಂಜಯಪ್ಪ, ಚಿತ್ರದುರ್ಗ.**

****

## ಲೇಖಕರ ಕೃತಿಗಳು

೧. ಹಾಡುಹಕ್ಕಿ ಅಂಬಿಕಾತನಯದತ್ತ (೧೯೯೫)
ಮೂರನೆ ಆವೃತ್ತಿ, ೨೦೧೨

೨. ಡಿ.ಆರ್. ಬೇಂದ್ರೆ (೧೯೯೭)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಆಂಗ್ಲಕೃತಿ.

೩. ನಾಕುತಂತಿ–ಒಂದು ಟಿಪ್ಪಣಿ (೨೦೦೦)
ಮೂರನೆ ಆವೃತ್ತಿ –೨೦೧೨

೪. ರಸ್ತೆ ನಿಯಮಗಳು (೨೦೦೦)
ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ
ಐದನೆ ಆವೃತ್ತಿ –೨೦೧೫

೫. ಹೂತsದ ಹುಣಸಿ (೨೦೦೦)
(ದ.ರಾ. ಬೇಂದ್ರೆ ಕಾವ್ಯ ವಿಮರ್ಶೆ)
ಎರಡನೆ ಆವೃತ್ತಿ ೨೦೧೧

೬. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ–ಒಂದು ಅಧ್ಯಯನ (೨೦೦೧)
(ಪಿಎಚ್.ಡಿ., ಮಹಾಪ್ರಬಂಧ)
ಎರಡನೆ ಆವೃತ್ತಿ ೨೦೧೨

೭. ಬರೆಹದಲ್ಲಿ ಬೇಂದ್ರೆಯವರ ಬದುಕು (೨೦೦೮)
ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ.

೮. ಅಂತರಂಗದತ್ತ ನಯನ (೨೦೧೦)

೯. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (೨೦೧೨)

೧೦. ಹರಿಹರ ಮಹಾಕವಿಯ ವಚನ ಗಿರಿಜಾಕಲ್ಯಾಣ (೨೦೧೩)

೧೧. ತಿರುತಿರುಗಿಯು ಹೊಸತಾಗಿರಿ (೨೦೧೫)

೧೨. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (೨೦೧೬)





ಮಿತ್ರರಾದ ಜಿ. ಕೃಷ್ಣಪ್ಪನವರು ಈಗಾಗಲೆ ಜೈಮಿನಿ ಭಾರತ ಮತ್ತು ಗಿರಿಜಾ ಕಲ್ಯಾಣ ಕೃತಿಗಳನ್ನು ಸರಳ ಗದ್ಯಾನುವಾದಕ್ಕೆ ಅಳವಡಿಸಿ ಸಂಪಾದನಾ ಕಾರ್ಯದಲ್ಲಿ ಪಳಗಿದ್ದಾರೆ. ಅವರು ಹರಿಶ್ಚಂದ್ರ ಕಾವ್ಯಾದ ಸೊಗಸಿಗೆ ಮಾರುಹೋಗಿ ಅದನ್ನು ಈಗಿನ ಓದುಗ ಪ್ರಜ್ಞೆಗೆ ಮುಟ್ಟಿಸುವ ಸದುದ್ದೇಶದಿಂದ ಈ ಬಗೆಯ ಗ್ರಂಥ ಸಂಪಾದನಾ ಕಾರ್ಯಕ್ಕೆ ಕೈಹಾಕಿರುವುದು ಶ್ಲಾಘನೀಯ ವಿಚಾರ. ರಾಘವಾಂಕನ ಹರಿಶ್ಚಂದ್ರ ಕಾವ್ಯದ ರಸಾರ್ದ್ರತೆಗೆ ಭಂಗ ಬರದಂತೆ ಹಾಗೂ ಯಾವುದೇ ವಿವರಗಳು ಕಣ್ತಪ್ಪಿ ಹೋಗದಂತೆ ಇಲ್ಲಿ ಎಚ್ಚರ ವಹಿಸಲಾಗಿದೆ. ಅಲ್ಲದೆ ಹರಿಶ್ಚಂದ್ರ ಕಾವ್ಯದ ವಸ್ತುಧ್ವನಿಗೆ ಎರವಾಗದ ವಿಮರ್ಶನ ಪ್ರಜ್ಞೆ ಇಲ್ಲಿ ಕೆಲಸ ಮಾಡಿದೆ. ಇಡೀ ತಮ್ಮ ಜೀವನವನ್ನು ಬೇಂದ್ರೆಯವರ ಕಾವ್ಯದ ಓದಿಗೆ ಸಮರ್ಪಿಸಿಕೊಂಡು ಕರ್ನಾಟಕದಾದ್ಯಂತ ಬೇಂದ್ರೆಯಜ್ಜನ ಕಾವ್ಯ ಪ್ರಸಾರದ ಪರಿಚಾರಿಕೆಯನ್ನು ಧಾರ್ಮಿಕ ಆಚರಣೆಯ ನಿಷ್ಠೆ ಗೌರವಗಳಲ್ಲಿ ನಡೆಸಿಕೊಂಡು ಬರುತ್ತಿರುವ ಆತ್ಮೀಯ ಮಿತ್ರ ಕೃಷ್ಣಪ್ಪನವರಿಗೆ ಕಾವ್ಯದ ಓದು ಎಂಬುದು ಹಗುರ ಸಂಗತಿಯಲ್ಲ. ಅದೊಂದು ಧ್ಯಾನ ಮನನ ಮಂಥನ ವಿಧಿಯಲ್ಲಿ ನಡೆಯುವ ಕಾಯಕ ಗೌರವ.

ಎಸ್.ಜಿ. ಸಿದ್ಧರಾಮಯ್ಯ




**ವಂಶಿ ಪಬ್ಲಿಕೇಷನ್ಸ್**
ನಂ.4, ಗಾಯತ್ರಿ ಕಾಂಪ್ಲೆಕ್ಸ್, ಬಿ.ಬಿ. ಬಸ್ ನಿಲ್ದಾಣದ ಹತ್ತಿರ
ಬಿ.ಹೆಚ್. ರಸ್ತೆ, ಸುಭಾಷ್‌ನಗರ, ನೆಲಮಂಗಲ,
ಬೆಂಗಳೂರು - 562 123
ಮೊಬೈಲ್: 97430 55511
ಇ-ಮೇಲ್: vamshipublications@gmail.com

₹120